# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೬ (ಶ್ರಾವಣ ೨೭, ಶಕ ವರ್ಷ ೧೯೩೮)<br>Bengaluru, Thursday, August 18, 2016 ( Shravana 27, Shaka Varsha 1938) | ಸಂಚಿಕೆ ೩೩<br>Issue 33 |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಹೆಚ್.ಇ. ಕೃಷ್ಣಮೂರ್ತಿ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಸಹಕಾರ ಇಲಾಖೆ ಇವರ ಸೇವೆಯನ್ನು, ನಗರಾಭಿವೃದ್ಧಿ ಇಲಾಖೆಯ ಕರ್ನಾಟಕ ಪೌರಾಡಳಿತ ಸೇವೆಯಲ್ಲಿ (ಕೆ.ಎಂ.ಎ.ಎಸ್.) ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ ಖಾಯಂ ಆಗಿ ವರ್ಗಾವಣೆ ಮೂಲಕ ವಿಲೀನಗೊಳಿಸುವ ಬಗ್ಗೆ–ಆದೇಶ.

**ಓದಲಾಗಿದೆ:**

1) ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ನಂ:ಸಿಓಎನ್‌ಎಫ್:25: 2005–06: ಪಿಎಸ್‌ಸಿ, ದಿನಾಂಕ: 28–02–2006.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 79 ಎಲೆಸೇ 2006 ದಿನಾಂಕ: 18–04–2006.
3) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 85 ಎಲೆಸೇ 2008 ದಿನಾಂಕ: 26–03–2008.
4) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಇ 213 ಎಲೆಸೇ 2013 ದಿನಾಂಕ: 25–02–2014
5) ನಗರಾಭಿವೃದ್ಧಿ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ನಅಇ 45 ಇಎಂಸಿ 2015, ದಿನಾಂಕ : 24–04–2015.
6) ಸಹಕಾರ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 58 ಎಲೆಸೇ 2015, ದಿನಾಂಕ: 18–08–2015.
7) ಶ್ರೀ ಹೆಚ್.ಇ. ಕೃಷ್ಣಮೂರ್ತಿ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಇವರ ಹಾಜರುಪಡಿಸಿರುವ ಪ್ರಮಾಣ ಪತ್ರ ದಿನಾಂಕ: 04–11–2015 ಮತ್ತು ದಿನಾಂಕ: 31–12–2015.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಅಧಿಸೂಚನೆರನ್ವಯ ಕರ್ನಾಟಕ ಗೆಜೆಟೆಡ್ ಪ್ರೋಬೇಷನರ್ಸ್‌ಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು 1977ರಡಿ ಕರ್ನಾಟಕ ಲೋಕಸೇವಾ ಆಯೋಗದಿಂದ ಪತ್ರಾಂಕಿತ ಪರೀಕ್ಷಾರ್ಥಿಗಳಾಗಿ ಆಯ್ಕೆ ಮಾಡಿ ಅಧಿಸೂಚನೆ ಹೊರಡಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ(2)ರನ್ವಯ ಕರ್ನಾಟಕ ಲೋಕಸೇವಾ ಆಯೋಗದಿಂದ ಪತ್ರಾಂಕಿತ ಪರೀಕ್ಷಾರ್ಥಿಗಳಾಗಿ ಆಯ್ಕೆಯಾಗಿರುವ ಶ್ರೀ ಹೆಚ್. ಇ. ಕೃಷ್ಣಮೂರ್ತಿ ಇವರನ್ನು ಸಹಕಾರ ಇಲಾಖೆಯಲ್ಲಿನ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರ ಹುದ್ದೆಗೆ ನೇಮಕ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರನ್ವಯ ಶ್ರೀ ಹೆಚ್.ಇ. ಕೃಷ್ಣಮೂರ್ತಿ, ಸಹಾಯಕ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ, ಗದಗ ಇವರ ಸೇವೆಯನ್ನು ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ ಬೆಂಗಳೂರು ಇಲ್ಲಿಗೆ ನಿಯೋಜನೆ ಮೇಲೆ ನೇಮಿಸಲು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರನ್ವಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆಯ ಸಹಾಯಕ ನಿರ್ದೇಶಕರುಗಳಿಗೆ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರ ಹುದ್ದೆಗೆ (ವೇತನ ಶ್ರೇಣಿ 36300–53850) ಪದೋನ್ನತಿ ನೀಡಿರುವ ಆದೇಶದಲ್ಲಿ ಶ್ರೀ ಹೆಚ್.ಇ. ಕೃಷ್ಣಮೂರ್ತಿ ಇವರಿಗೂ ಸಹ ಬಡ್ತಿ ನೀಡಿ ಇವರ ಸೇವೆಯನ್ನು ಕರ್ನಾಟಕ ನಗರ ಮೂಲ ಸೌಕರ್ಯ ಅಭಿವೃದ್ಧಿ ಮತ್ತು ಹಣಕಾಸು ಸಂಸ್ಥೆ ಬೆಂಗಳೂರು ಇಲ್ಲಿಗೆ ನಿಯೋಜನೆ ಮೇಲೆ ಮುಂದುವರೆಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಹೆಚ್.ಇ. ಕೃಷ್ಣಮೂರ್ತಿ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಇವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ಕರ್ನಾಟಕ ಪೌರಾಡಳಿತ ಸೇವೆಯಲ್ಲಿನ ಕೆ.ಎಂ.ಎ.ಎಸ್. ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ ಖಾಯಂ ಆಗಿ ವರ್ಗಾವಣೆ ಮೂಲಕ/ ವಿಲೀನಗೊಳಿಸಲು ಅವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ಬಿಟ್ಟುಕೊಡಲು ಸಹಮತಿ ಇರುವ ಬಗ್ಗೆ ಮಾಹಿತಿ ನೀಡುವಂತೆ ಸಹಕಾರ ಇಲಾಖೆಯನ್ನು ಕೋರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಶ್ರೀ ಹೆಚ್.ಇ. ಕೃಷ್ಣಮೂರ್ತಿ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಸಹಕಾರ ಇಲಾಖೆ ಇವರ ಸೇವೆಯನ್ನು, ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(a) (ii) ರನ್ವಯ ಕರ್ನಾಟಕ ಪೌರಾಡಳಿತ ಸೇವೆಯಲ್ಲಿನ (ಕೆ.ಎಂ.ಎ.ಎಸ್.) ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ ಖಾಯಂ ಆಗಿ ವರ್ಗಾವಣೆ ಮೂಲಕ/ವಿಲೀನಗೊಳಿಸಲು ಅವರ ಸೇವೆಯನ್ನು ನಗರಾಭಿವೃದ್ಧಿ ಇಲಾಖೆಯ ವಶಕ್ಕೆ ಬಿಟ್ಟುಕೊಡಲು ಸಹಕಾರ ಇಲಾಖೆಯು ಸಹಮತಿ ನೀಡಿರುತ್ತದೆ ಮತ್ತು ಶ್ರೀ ಹೆಚ್.ಇ. ಕೃಷ್ಣಮೂರ್ತಿ ಇವರ ಸೇವಾ ವಿವರವನ್ನು ಈ ಕೆಳಕಂಡಂತೆ ನೀಡಿರುತ್ತಾರೆ.

| ಹೆಸರು ಮತ್ತು ಹುದ್ದೆ | ಸೇವೆಗೆ ಸೇರಿದ ದಿನಾಂಕ ಮತ್ತು ಹುದ್ದೆ | ಅರ್ಹತಾ ಪೂರ್ವ ಪರೀಕ್ಷಾವಧಿಯನ್ನು ತೃಪ್ತಿಕರವಾಗಿ ಘೋಷಣೆ ಮಾಡಿದ ದಿನಾಂಕ | ಶಿಸ್ತು ಪ್ರಕರಣಗಳು ಬಾಕಿ ಇದೆಯೇ? | ಪ್ರಸ್ತುತ ಹುದ್ದೆಗೆ ಪದೋನ್ನತಿ ಹೊಂದಿದ ದಿನಾಂಕ | ವೇತನ ಶ್ರೇಣಿ |
|---|---|---|---|---|---|
| ಶ್ರೀ ಹೆಚ್.ಇ. ಕೃಷ್ಣಮೂರ್ತಿ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು | 24–04–2006 ಸ.ಸಂಲೆ.ಪ ಸಹಾಯಕ ನಿರ್ದೇಶಕರು | 23–04–2008 | ಇರುವುದಿಲ್ಲ | ಸರ್ಕಾರದ ಆದೇಶ ಸಂ: ಸಇ 213 ಎಲೆಸೇ 2013 ದಿನಾಂಕ: 25–02–2014 | ₹. 36,300–58,850 |

ಮೇಲೆ ಓದಲಾದ ಕ್ರಮ ಸಂಖ್ಯೆ (7)ರನ್ವಯ ಶ್ರೀ ಹೆಚ್.ಇ. ಕೃಷ್ಣಮೂರ್ತಿ, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರು, ಸಹಕಾರ ಇಲಾಖೆ ಇವರ ಸೇವೆಯನ್ನು, ಕರ್ನಾಟಕ ಪೌರಾಡಳಿತ ಸೇವೆಯ, ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ ಷರತ್ತು ಮತ್ತು ನಿಂಬಂಧನೆಗಳೊಂದಿಗೆ ಖಾಯಂ ಆಗಿ ವಿಲೀನಗೊಳಿಸಲು ಅವರ ಒಪ್ಪಿಗೆ ಪತ್ರವನ್ನು ₹. 100/–ರ ದಾಖಲೆ ಪತ್ರದಲ್ಲಿ ನೋಟರಿಯಿಂದ ದೃಢೀಕರಿಸಿ ಹಾಜರುಪಡಿಸಿರುತ್ತಾರೆ.

ಶ್ರೀ ಹೆಚ್.ಇ. ಕೃಷ್ಣಮೂರ್ತಿ ಇವರು ದಿನಾಂಕ: 08–04–2008 ರಿಂದ ಇಂದಿನವರೆಗೆ ನಿಯೋಜನೆ ಮೇಲೆ ನಗರಾಭಿವೃದ್ಧಿ ಇಲಾಖೆಯ ಜಂಟಿ ನಿರ್ದೇಶಕರು (ಯೋಜನೆ) ಶಾಖೆಯಲ್ಲಿ ಕರ್ತವ್ಯ ನಿರ್ವಹಿಸಿರುತ್ತಾರೆ. ಇದರಿಂದ ನಗರಾಭಿವೃದ್ಧಿ ಇಲಾಖೆಯ ಯೋಜನೆಗಳು, ಕಾರ್ಯ ವಿಧಾನ ಇತ್ಯಾದಿ ವಿಷಯಗಳ ಬಗ್ಗೆ ಆಳವಾದ ಜ್ಞಾನ ಹೊಂದಿದ್ದು, ಸರ್ಕಾರದ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಇವರ ಸೇವೆ ನಗರಾಭಿವೃದ್ಧಿ ಇಲಾಖೆಗೆ ಅವಶ್ಯಕವಾಗಿರುತ್ತದೆ.

ಶ್ರೀ ಹೆಚ್.ಇ. ಕೃಷ್ಣಮೂರ್ತಿ ಇವರು ಕೆ.ಪಿ.ಎಸ್.ಸಿ. ಮೂಲಕ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರ ಹುದ್ದೆಗೆ ನೇಮಕಗೊಂಡು ಏಪ್ರಿಲ್ 2006 ರಿಂದ ಸರ್ಕಾರಿ ಸೇವೆಯಲ್ಲಿರುತ್ತಾರೆ. ಮತ್ತು ಇವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಹಾಗೂ ದಿನಾಂಕ: 25–02–2014 ರಂದು ಆ ಇಲಾಖೆಯ ಉಪ ನಿರ್ದೇಶಕರ ಹುದ್ದೆಗೆ ಬಡ್ತಿ ಹೊಂದಿರುತ್ತಾರೆ. ಅವರ ಪ್ರಸ್ತುತ ವೇತನ ಶ್ರೇಣಿ ₹. 36300–53850 ಆಗಿದ್ದು ಅವರ ಪ್ರಸ್ತುತ ಮೂಲ ವೇತನ 38100/– ಆಗಿರುತ್ತದೆ.. ಪೌರಾಡಳಿತ ಸೇವೆಯ ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಯ ವೇತನ ಶ್ರೇಣಿ 28100–50100 (28100–700–28800–800–33600–900–39000–1050–45300–1200–47700) ಆಗಿರುತ್ತದೆ. ಪ್ರಸ್ತುತ ನಗರಾಭಿವೃದ್ಧಿ ಇಲಾಖೆಯ ಕರ್ನಾಟಕ ಪೌರಾಡಳಿತ ಸೇವೆಯಲ್ಲಿ ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗಳು ಖಾಲಿ ಇರುತ್ತವೆ.

ಶ್ರೀ ಹೆಚ್.ಇ. ಕೃಷ್ಣಮೂರ್ತಿ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರು ಸಹಕಾರ ಇಲಾಖೆ ಇವರ ವೇತನ ಶ್ರೇಣಿ ಹೆಚ್ಚಿನದಿದ್ದು, ವಿಲೀನಗೊಳಿಸಲು ಉದ್ದೇಶಿಸಿರುವ ಹುದ್ದೆಯ ವೇತನ ಶ್ರೇಣಿ ಕಡಿಮೆ ಇರುತ್ತದೆ. ಆದರೆ ಅಧಿಕಾರಿ ವೇತನ ರಕ್ಷಣೆಯೊಂದಿಗೆ ಕಡಿಮೆ ವೇತನ ಶ್ರೇಣಿಯ ಹುದ್ದೆಯಲ್ಲಿ ವಿಲೀನಗೊಳಿಸಲು ಲಿಖಿತವಾಗಿ ಇಚ್ಛೆ ವ್ಯಕ್ತಪಡಿಸಿರುತ್ತಾರೆ. ಈ ಹಿಂದೆ ನಿಯಮಗಳ ಚೌಕಟ್ಟಿನಲ್ಲಿ ತೆಗೆದುಕೊಂಡಿರುವ ನೀತಿ ನಿರ್ಧಾರದಂತೆ ಹೆಚ್ಚಿನ ವೇತನವನ್ನು ರಕ್ಷಿಸಲು ಅವಕಾಶವಿಲ್ಲ. ಅವರು ಪ್ರಾರಂಭದಿಂದಲೂ ನೇಮಕ ಹೊಂದಿದ್ದರೂ ಎಂದು ಭಾವಿಸಿ (ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರ ಹುದ್ದೆಯ ಬದಲಾಗಿ ಪೌರಾಯುಕ್ತರು ಶ್ರೇಣಿ–2ರ ಹುದ್ದೆಯಲ್ಲಿ) ಕರ್ನಾಟಕ ನಾಗರಿಕ ಸೇವಾ ನಿಯಮಗಳ ನಿಯಮ 41ಎ((i) ರನ್ವಯ ವೇತನ ನಿಗಧಿಗೊಳಿಸಲು ಅವಕಾಶವಿರುತ್ತದೆ.

ಶ್ರೀ ಹೆಚ್.ಇ. ಕೃಷ್ಣಮೂರ್ತಿ ಉಪ ನಿರ್ದೇಶಕರು, (ವೇತನ ಶ್ರೇಣಿ 36300–53850) ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆ ಇವರನ್ನು ಪೌರಾಡಳಿತ ಸೇವೆಯ (ಕೆಎಂಎಎಸ್) ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ (ವೇತನ ಶ್ರೇಣಿ ₹. (28100–700–28800–800–33600–900–39000–1050–45300–1200–47700) ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(a) (ii) ರನ್ವಯ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಖಾಯಂ ಆಗಿ ವರ್ಗಾವಣೆ ಮೂಲಕ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ನಅಇ 45 ಇಎಂಸಿ 2015, ಬೆಂಗಳೂರು, ದಿನಾಂಕ: 04–04–2016**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಹೆಚ್.ಇ. ಕೃಷ್ಣಮೂರ್ತಿ ಉಪ ನಿರ್ದೇಶಕರು, (ವೇತನ ಶ್ರೇಣಿ ₹. 36300–53850) ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆ ಇವರನ್ನು ಪೌರಾಡಳಿತ ಸೇವೆಯ (ಕೆಎಂಎಎಸ್) ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ,

(ವೇತನ ಶ್ರೇಣಿ ₹. (28100–700–28800–800–33600–900–39000–1050–45300–1200–47700) ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(a) (ii) ರನ್ವಯ ಸಾರ್ವಜನಿಕ ಮತ್ತು ಆಡಳಿತಾತ್ಮಕ ಹಿತದೃಷ್ಟಿಯಿಂದ ಖಾಯಂ ಆಗಿ ವರ್ಗಾವಣೆ ಮೂಲಕ ವಿಲೀನಗೊಳಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 871 ಸೇ–1:15 ದಿನಾಂಕ: 26–12–2015ರಂದು ನೀಡಿರುವ ಸಹಮತಿರನ್ವಯ ಮತ್ತು ಸಿ.ಆ.ಸು. ಇಲಾಖೆ (ಸೇವಾ ನಿಯಮಗಳು–1)ಯ ಟಿಪ್ಪಣಿ ಸಂಖ್ಯೆ: 25 ಸೇನಿಎ 2016 ದಿನಾಂಕ: 18–02–2016ರನ್ವಯ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

**ಷರತ್ತುಗಳು :**

1. ಶ್ರೀ ಹೆಚ್.ಇ. ಕೃಷ್ಣಮೂರ್ತಿ ಇವರನ್ನು ನಗರಾಭಿವೃದ್ಧಿ ಇಲಾಖೆಯಲ್ಲಿ ಖಾಯಂ ವಿಲೀನಗೊಳಿಸಿರುವುದರಿಂದ ಈ ಅಧಿಕಾರಿಯು ಸಹಕಾರ ಇಲಾಖೆಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರ ವೃಂದದ ಜೇಷ್ಠತೆಯನ್ನು ಬಿಟ್ಟುಕೊಟ್ಟು ಪೌರಾಡಳಿತ ಸೇವೆಯಲ್ಲಿನ ಪೌರಾಯುಕ್ತರು ಶ್ರೇಣಿ–2 ವೃಂದದ ಜೇಷ್ಠತೆಯನ್ನು ನಿಯಮಾನುಸಾರ ನಿಗಧಿಪಡಿಸತಕ್ಕದ್ದು.
2. ಶ್ರೀ ಹೆಚ್.ಇ. ಕೃಷ್ಣಮೂರ್ತಿ ಉಪ ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆ ಇವರನ್ನು ಪೌರಾಡಳಿತ ಸೇವೆಯ (ಕೆಎಂಎಎಸ್) ಪೌರಾಯುಕ್ತರು ಶ್ರೇಣಿ–2 ವೃಂದದ ಹುದ್ದೆಗೆ ವಿಲೀನಗೊಳಿಸಿರುವುದರಿಂದ ಇವರು ಕೆ.ಸಿ.ಎಸ್.ಆರ್. ನಿಯಮ 41ಎ((i) ರನ್ವಯ ವೇತನ ಪುನರ್ ನಿಗಧಿಗೆ ಅರ್ಹರಿರುತ್ತಾರೆ.
3. ಶ್ರೀ ಹೆಚ್.ಇ. ಕೃಷ್ಣಮೂರ್ತಿ ಇವರು ಸಹಕಾರ ಇಲಾಖೆಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರು ಮತ್ತು ಉಪ ನಿರ್ದೇಶಕರಾಗಿ ಸಲ್ಲಿಸಿರುವ ಸೇವೆಯನ್ನು ಕೆ.ಸಿ.ಎಸ್.ಆರ್. ನಿಯಮ 20 ರಡಿ ಟಿಪ್ಪಣಿ 4 ರನ್ವಯ ರಜೆ ಮತ್ತು ಇತರೆ ಸೌಲಭ್ಯಗಳ ಉದ್ದೇಶಗಳಿಗಾಗಿ ಪರಿಗಣಿಸಬಹುದಾಗಿದೆ.
4. ಸದರಿಯವರು ಈ ರೀತಿ ಒಂದು ಜೇಷ್ಠತಾ ಘಟಕದಿಂದ ಮತ್ತೊಂದು ಜೇಷ್ಠತಾ ಘಟಕಕ್ಕೆ ಮತ್ತೊಮ್ಮೆ ಬದಲಾವಣೆ ಹೊಂದಲು ಅರ್ಹರಿರುವುದಿಲ್ಲ.
5. ಈ ಅಧಿಕಾರಿಯು ವರ್ಗಾವಣೆ ಮೂಲಕ ನೇಮಿಸಿರುವ ಹುದ್ದೆಗೆ ನಿಗಧಿಪಡಿಸಿರುವ ಇಲಾಖಾ ಪರೀಕ್ಷೆಗಳನ್ನು ಎರಡು ವರ್ಷದ ಒಳಗಾಗಿ ಪಾಸುಮಾಡತ್ತಕ್ಕದ್ದು. ಇಲ್ಲದಿದ್ದಲ್ಲಿ ಇವರ ಸೇವೆಯನ್ನು ಅವರ ಮಾತೃ ಇಲಾಖೆಗೆ ಹಿಂದುರುಗಿಸಲಾಗುವುದು.
6. ಪೌರಾಡಳಿತ ಇಲಾಖೆಯಲ್ಲಿ ನಿಯೋಜನೆ ಮೇಲೆ ಪೌರಾಯುಕ್ತರಾಗಿ/ ಯೋಜನಾ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಅನ್ಯ ಇಲಾಖೆಯ ಅಧಿಕಾರಿ/ನೌಕರರುಗಳನ್ನು ಪೌರ ಸೇವೆಯಲ್ಲಿನ ಪೌರಾಯುಕ್ತರ ಹುದ್ದೆಯಲ್ಲಿ ಖಾಯಂ ವಿಲೀನ/ವರ್ಗಾವಣೆ ಮುಖಾಂತರ ನೇಮಕಾತಿ ಮಾಡುವಂತೆ ಕೋರಿ ಇನ್ನು ಮುಂದೆ ನಗರಾಭಿವೃದ್ಧಿ ಇಲಾಖೆಗೆ ಸಲ್ಲಿಸುವ ಕೋರಿಕೆಯನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ. ಮತ್ತು ಈ ಆದೇಶವನ್ನು ಅಂತಹ ಕೋರಿಕೆಗಳನ್ನು ಪರಿಶೀಲಿಸಲು ಪೂರ್ವ ನಿದರ್ಶನವನ್ನಾಗಿ ಪರಿಗಣಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-318**

**SC-100**

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ.

## ಸಹಕಾರ ಸಚಿವಾಲಯ

**ವಿಷಯ :** 2016–17ನೇ ಸಾಲಿಗೆ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯನ್ನು ಮುಂದುವರೆಸಲು ಹಾಗೂ ಹೊಸ ಸದಸ್ಯರುಗಳನ್ನು ನೋಂದಾಯಿಸಲು ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಸಿಒ/162/ಸಿಎಲ್ಎಸ್/2015. ಬೆಂಗಳೂರು ದಿನಾಂಕ: 15–04–2016.

### ತಿದ್ದುಪಡಿ ಆದೇಶ

**ಸರ್ಕಾರಿ ಆದೇಶ ಸಂಖ್ಯೆ: ಸಿಒ/162/ಸಿಎಲ್ಎಸ್/ 2015, ಬೆಂಗಳೂರು, ದಿನಾಂಕ: 26–04–2016**

ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ಯಶಸ್ವಿನಿ ಸಹಕಾರ ರೈತರ ಆರೋಗ್ಯ ರಕ್ಷಣಾ ಯೋಜನೆಯಲ್ಲಿ 2016–17ನೇ ಸಾಲಿನಲ್ಲಿ ಗ್ರಾಮೀಣ ಸಹಕಾರ ಸಂಘದ ಸದಸ್ಯರು ಮತ್ತು ಅವರ ಕುಟುಂಬ ವರ್ಗದವರು ನೋಂದಾಯಿಸಲು ಆದೇಶವನ್ನು ಹೊರಡಿಸಲಾಗಿದ್ದು, ಸದರಿ ಆದೇಶದ ಮಾರ್ಗಸೂಚಿ ಕ್ರಮ ಸಂಖ್ಯೆ: 27ರಲ್ಲಿ ಯೋಜನೆಯ ಅವಧಿಯು **"01–06–2015 ರಿಂದ ಪ್ರಾರಂಭವಾಗಿ"** ಎಂದು ಇರುವುದನ್ನು **"01–06–2016 ರಿಂದ ಪ್ರಾರಂಭವಾಗಿ"** ಎಂದು ಬದಲಾಯಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 319**

**SC-100**

**ಎಂ ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಮತ್ತು ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ:** ರಾಜ್ಯದಲ್ಲಿ ಉದ್ಭವಿಸಿರುವ ತೀವ್ರ ಬರ ಪರಿಸ್ಥಿತಿ ಪರಿಣಾಮವಾಗಿ ರಾಜ್ಯದ ಸಹಕಾರ ಸಂಸ್ಥೆಗಳ ಮೂಲಕ ಸಾಲ ಪಡೆದು ದಿನಾಂಕ: 30–09–2015ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಮೇಲಿನ ಬಡ್ಡಿಯನ್ನು ಮನ್ನಾ ಮಾಡುವ ದಿನಾಂಕವನ್ನು ದಿನಾಂಕ: 31–03–2016 ರಿಂದ 30–09–2016 ರವರೆಗೆ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 358 ಸಿಎಲ್ಎಸ್ 2015, ದಿನಾಂಕ: 20–10–2015.
2. ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಇವರ ಪತ್ರ ಸಂಖ್ಯೆ: ಸಿಆರ್‌ಡಿ/ಸಿಎಬಿ–1/71/2015–16, ದಿನಾಂಕ:29–03–2016.

**ಪ್ರಸ್ತಾವನೆ :–**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ರೈತರು ರಾಜ್ಯದ ಸಹಕಾರ ಸಂಘಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು, ಲ್ಯಾಂಪ್ಸ್ ಸಹಕಾರ ಸಂಘಗಳು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳಿಂದ ಸಾಲ ಪಡೆದು ದಿನಾಂಕ: 30–09–2015ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಕಂತುಗಳ ಅಸಲನ್ನು ದಿನಾಂಕ: 31–03–2016ರೊಳಗೆ ಸಂಬಂಧಪಟ್ಟ ಪತ್ತಿನ ಸಹಕಾರ ಸಂಘ/ಬ್ಯಾಂಕುಗಳಿಗೆ ಪೂರ್ತಿಯಾಗಿ ಮರುಪಾವತಿಸಿದಲ್ಲಿ ಈ ಮೊತ್ತಗಳಿಗೆ ಬಾಕಿ ಇರುವ ಬಡ್ಡಿಯನ್ನು ಮನ್ನಾ ಮಾಡಲು ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಪತ್ತು ಇವರು 2016–17ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 65ರ 6ನೇ ಪ್ಯಾರಾದಲ್ಲಿ ಬರ ಪರಿಸ್ಥಿಯನ್ನು ಗಮನದಲ್ಲಿರಿಸಿ, ರೈತರಿಗೆ ಈ ಸಾಲವನ್ನು ಮರುಪಾವತಿಸುವ ಕಾಲಾವಕಾಶವನ್ನು ದಿನಾಂಕ: 30–09–2016 ರವರೆಗೆ ವಿಸ್ತರಿಸಲು ಘೋಷಣೆ ಮಾಡಲಾಗಿರುತ್ತದೆ ಎಂದು ತಿಳಿಸಿ, ಅದರಂತೆ ಸಾಲ ಮರುಪಾವತಿಸುವ ಕಾಲಾವಕಾಶವನ್ನು ದಿನಾಂಕ: 30–09–2016 ರವರೆಗೆ ವಿಸ್ತರಿಸಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಿಒ 358 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 07–04–2016

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರೈತರು ರಾಜ್ಯದ ಸಹಕಾರ ಸಂಘಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು, ಲ್ಯಾಂಪ್ಸ್ ಸಹಕಾರ ಸಂಘಗಳು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳಿಂದ ಸಾಲ ಪಡೆದು ದಿನಾಂಕ: 30–09–2015ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಕಂತುಗಳ ಅಸಲನ್ನು ಮರುಪಾವತಿಸಲು ನಿಗಧಿಪಡಿಸಲಾದ ದಿನಾಂಕವನ್ನು ದಿನಾಂಕ: 31–03–2016ರಿಂದ 30–09–2016ರವರೆಗೆ ವಿಸ್ತರಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆದೇಶ ಹೊರಡಿಸಿದೆ.

**ಷರತ್ತುಗಳು :**

1. ಈ ಸೌಲಭ್ಯವು ರೈತರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಲ್ಯಾಂಪ್ಸ್ ಸಹಕಾರ ಸಂಘಗಳು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳಿಂದ ಸಾಲ ಪಡೆದು ದಿನಾಂಕ: 30–09–2015ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ. ಈ ಯೋಜನೆ ಕೃಷಿಯೇತರ ಸಾಲಗಳಿಗೆ ಅನ್ವಯವಾಗುವುದಿಲ್ಲ ಮತ್ತು ಮೇಲೆ ತಿಳಿಸಿರುವ ಸಂಸ್ಥೆಗಳನ್ನು ಹೊರತುಪಡಿಸಿ ಇತರೆ ಸಹಕಾರ ಸಂಸ್ಥೆಗಳಲ್ಲಿ ಪಡೆದ ಸಾಲಗಳಿಗೆ ಅನ್ವಯಿಸುವುದಿಲ್ಲ.
2. ಕೃಷಿ ಪತ್ತಿನ ಸಹಕಾರ ಸಂಘ /ಬ್ಯಾಂಕುಗಳಿಂದ ಪಡೆದು ದಿ: 30–09–2015ಕ್ಕೆ ಸುಸ್ತಿಯಾಗಿರುವ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲಗಳ ಅಸಲನ್ನು ದಿನಾಂಕ: 30–09–2016ರೊಳಗೆ ಸಂಬಂಧಪಟ್ಟ ಸಂಸ್ಥೆಗಳಿಗೆ ಸಾಲ ಪಡೆದ ರೈತರು ಮರುಪಾವತಿ ಮಾಡಿದಲ್ಲಿ ಸದರಿ ಸಾಲಗಳ ಮೇಲಿನ ಮರುಪಾವತಿ ದಿನಾಂಕದವರೆಗಿನ ಬಡ್ಡಿಯನ್ನು ಮನ್ನಾ ಮಾಡಿ ಸಂಬಂಧಪಟ್ಟ ಸಹಕಾರಿ ಸಂಸ್ಥೆಗಳಿಗೆ ಸರ್ಕಾರ ಭರಣ ಮಾಡುವುದು.
3. ಈ ಯೋಜನೆಯಡಿಯಲ್ಲಿ ಪ್ರಾಥಮಿಕ ಸಹಕಾರ ಸಂಘಗಳು ಮತ್ತು ಡಿ.ಸಿ.ಸಿ ಬ್ಯಾಂಕು ಮತ್ತು ಪಿಕಾರ್ಡಬ್ಯಾಂಕುಗಳಿಗೆ ರೈತರು ಮರುಪಾವತಿಸುವ ಸುಸ್ತಿ ಸಾಲದ ಅಸಲು ದಿನಾಂಕ: 01–04–2004ಕ್ಕಿಂತ ಹಿಂದಿನ ಅವಧಿಯ ಸಾಲವಾಗಿದ್ದರೆ, ಬಡ್ಡಿ ಪಾವತಿಸಲು ಬಾಕಿ ಇದ್ದ ದಿನಾಂಕದಿಂದ ಸಾಲ ಮರುಪಾವತಿ ದಿನಾಂಕದವರೆಗೆ ಸಾಲಗಳಿಗೆ ನಿಗಧಿಮಾಡಲಾಗಿರುವ ಬಡ್ಡಿ ದರ ಅಥವಾ ಶೇ. 11.50 ಬಡ್ಡಿದರ ಇದರಲ್ಲಿ ಯಾವುದು ಕಡಿಮೆಯೋ ಅಂತಹ ಬಡ್ಡಿ ಆಧಾರದಲ್ಲಿ ಸಹಕಾರ ಸಂಘಗಳಿಗೆ ಸರ್ಕಾರದವತಿಯಿಂದ ಬಡ್ಡಿ ಸಹಾಯಧನವನ್ನು ಭರಿಸಲಾಗುವುದು. ದಿನಾಂಕ: 01–04–2004ರ ನಂತರದಲ್ಲಿನ ಸಾಲಗಳಿಗೆ ಆಯಾ ವರ್ಷದಲ್ಲಿ ರೈತರು ಪಾವತಿಸಬೇಕಾದ ಬಡ್ಡಿ ಮತ್ತು ಸರ್ಕಾರ ಪಾವತಿಸಬೇಕಾದ ಬಡ್ಡಿ ಸಹಾಯಧನದ ಒಟ್ಟು ಬಡ್ಡಿಯನ್ನು ಸಂಬಂಧಿಸಿದ ಸಹಕಾರ ಸಂಸ್ಥೆಗಳಿಗೆ ಸರ್ಕಾರದಿಂದ ಭರಿಸಲಾಗುವುದು.
4. ಈ ಯೋಜನೆಯಲ್ಲಿ ಮರುಪಾವತಿಸುವ ಸಾಲಗಳಿಗೆ ಯಾವುದೇ ಸುಸ್ತಿ ಬಡ್ಡಿ, ನಿಗಧಿಪಡಿಸಿದ ದರಕ್ಕಿಂತ ಹೆಚ್ಚಿನ ಬಡ್ಡಿಯನ್ನು ವಸೂಲಿ ವೆಚ್ಚ (Recovery Charges) ಹಾಗೂ ಇತರೇ ವೆಚ್ಚಗಳನ್ನು ಸಹಕಾರ ಸಂಸ್ಥೆಗಳು ಕ್ಲೇಮು ಮಾಡತಕ್ಕದ್ದಲ್ಲ. ಈ ವೆಚ್ಚಗಳನ್ನು ಸಹಕಾರ ಸಂಸ್ಥೆಗಳು ತಮ್ಮ ಸ್ವಂತ ನಿಧಿಯಲ್ಲಿ ಭರಿಸಿಕೊಂಡು ರೈತರ ಖಾತೆಗಳನ್ನು ಮುಕ್ತಾಯಗೊಳಿಸಿ ಹೊಸ ಸಾಲಗಳನ್ನು ನೀಡತಕ್ಕದ್ದು.

5. ಈ ಯೋಜನೆಯಲ್ಲಿ ತಗಲುವ ವೆಚ್ಚವನ್ನು 2016–17ನೇ ಸಾಲಿಗೆ ಸಹಕಾರ ಇಲಾಖೆಗೆ ಒದಗಿಸಿರುವ ಆಯವ್ಯಯದ ಲೆಕ್ಕ ಶೀರ್ಷಿಕೆ 2425–00–107–2–54 ರಿಂದ ಭರಿಸತಕ್ಕದ್ದು.

6. ಈ ಯೋಜನೆಯಡಿಯಲ್ಲಿ ಸುಸ್ತಿ ಸಾಲ ವಸೂಲಾತಿಯಲ್ಲಿ ಮುಗಿದ ಕೂಡಲೇ ಮಾಸಿಕವಾಗಿ ಮೇಲೆ ಸೂಚಿಸಿದ ಬಡ್ಡಿದರದನ್ವಯ ಕ್ಲೈಂ ಬಿಲ್ಲುಗಳನ್ನು ಸಹಕಾರ ಸಂಸ್ಥೆಗಳು ಸಲ್ಲಿಸತಕ್ಕದ್ದು.

7. ಪ್ಯಾಕ್ಸ್/ಲ್ಯಾಂಪ್ಸ್ ಸಹಕಾರ ಸಂಘಗಳು ಹಾಗೂ ಡಿ.ಸಿ.ಸಿ ಬ್ಯಾಂಕುಗಳ ಬಿಲ್ಲುಗಳನ್ನು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ತಯಾರಿಸಿ ಸಹಕಾರ ಸಂಘಗಳ ಲೆಕ್ಕಪರಿಶೋಧನ ಉಪನಿರ್ದೇಶಕರು ಮತ್ತು ಸಹಕಾರ ಸಂಘಗಳ ಉಪನಿಬಂಧಕರು ಇವರುಗಳ ಜಂಟಿ ದೃಢೀಕರಣದೊಂದಿಗೆ ಮಾಸಿಕ ಬಿಲ್ಲುಗಳನ್ನು ಬಿಡುಗಡೆಗೆ ವ್ಯವಸ್ಥಾಪಕ ನಿರ್ದೇಶಕರು, ಅಪೆಕ್ಸ್ ಬ್ಯಾಂಕ್ ಇವರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

8. ಪಿಕಾರ್ಡ್ ಬ್ಯಾಂಕುಗಳ ಬಿಲ್ಲುಗಳನ್ನು ಜಿಲ್ಲಾ ವ್ಯವಸ್ಥಾಪಕರು ತಯಾರಿಸಿ ಸಹಕಾರ ಸಂಘಗಳ ಲೆಕ್ಕಪರಿಶೋಧನ ಉಪನಿರ್ದೇಶಕರು ಮತ್ತು ಸಹಕಾರ ಸಂಘಗಳ ಉಪನಿಂಧಕರು ಇವರುಗಳ ಜಂಟಿ ದೃಢೀಕರಣದೊಂದಿಗೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಇವರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

9. ಸಹಕಾರ ಸಂಘಗಳ ನಿಬಂಧಕರು ಅರ್ಹ ಕ್ಲೈಂಗಳನ್ನು ಪರಿಶೀಲಿಸಿ, ನಿಗಧಿತವಾಗಿ ಹಣ ಬಿಡುಗಡೆಗೆ ಕ್ರಮವಿಡತಕ್ಕದ್ದು ಮತ್ತು ಕಾಲಕಾಲಕ್ಕೆ ಸರ್ಕಾರಕ್ಕೆ ಬಳಕೆ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

10. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆ ಅನುಷ್ಠಾನಕ್ಕಾಗಿ ಅಗತ್ಯವಿರುವ ಪ್ರಪತ್ರಗಳನ್ನು ಒದಗಿಸಲು ಮತ್ತು ಕಾಲಕಾಲಕ್ಕೆ ಸಂಬಂಧಿಸಿದವರಿಗೆ ಅಗತ್ಯ ಸಲಹೆ/ಸೂಚನೆ/ನಿರ್ದೇಶನಗಳನ್ನು ನೀಡತಕ್ಕದ್ದು.

11. ಈ ಯೋಜನೆಯು ಜಾರಿ ಇರುವ ಬಗ್ಗೆ ಎಲ್ಲಾ ಸಾಲಗಾರ ಸದಸ್ಯರಿಗೆ ಪತ್ರದ ಮುಖೇನ ಸಾಲದ ಸೌಲಭ್ಯ ಮತ್ತು ಇದರಿಂದ ರೈತ ಸದಸ್ಯರಿಗೆ ದೊರೆಯುವ ರಿಯಾಯಿತಿ ವಿವರಗಳನ್ನು ಸಂಘದ ಮೂಲಕ ತಿಳಿಸುವ ವ್ಯವಸ್ಥೆಯನ್ನು ನಿಬಂಧಕರು ಮಾಡತಕ್ಕದ್ದು.

12. ಈ ಯೋಜನೆಯಡಿ ಕ್ಲೈಂ ಬಿಲ್ಲುಗಳನ್ನು ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸಲು ದಿನಾಂಕ: 31–12–2016 ಅಂತಿಮ ದಿನಾಂಕವಾಗಿರತಕ್ಕದ್ದು. ರೈತರು ಸುಸ್ತಿ ಅಸಲು ಮೊತ್ತವನ್ನು ಮರುಪಾವತಿಸುವ ದಿನಾಂಕದವರೆಗೆ ಮಾತ್ರ ಬಡ್ಡಿ ಕ್ಲೇಮುಗಳಿಗೆ ಅವಕಾಶವಿರುತ್ತದೆ. ಯಾವುದೇ ಕಾರಣದಿಂದಾಗಿ ಕ್ಲೇಮು ಮೊತ್ತ ಬಿಡುಗಡೆಗೆ ಆಗುವ ವಿಳಂಬದ ಅವಧಿಗೆ ಯಾವುದೇ ಕ್ಲೇಮುಗಳಿಗೆ ಅವಕಾಶವಿರುವುದಿಲ್ಲ.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 75 ವೆಚ್ಚ–2/2016 ದಿನಾಂಕ: 07–04–2016 ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

PR-320
SC-250

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ–3

ಸಹಕಾರ ಇಲಾಖೆ

## ಆರ್ಥಿಕ ಸಚಿವಾಲಯ

## ತಿದ್ದುಪಡಿ

### ಸಂಖ್ಯೆ: ಆಇ 33 ಸಿಎಸ್‌ಎಲ್ 2014, ಬೆಂಗಳೂರು, ದಿನಾಂಕ: 05–04–2016

ಸರ್ಕಾರದ ಆದೇಶ ಸಂಖ್ಯೆ: ಆಇ 33 ಸಿಎಸ್‌ಎಲ್ 2014, ದಿನಾಂಕ: 29–10–2015ರ ಆದೇಶ ಭಾಗದಲ್ಲಿನ **"261–ಅಂತರ್ ಲೆಕ್ಕ ವರ್ಗಾವಣೆಗಳು"** ಎಂಬ ಪದಗಳ ಬದಲಾಗಿ **"100–ಆರ್ಥಿಕ ನೆರವು/ ಪರಿಹಾರ"** ಎಂಬುದಾಗಿ ಓದಿಕೊಳ್ಳತಕ್ಕದು.

P.R. 321

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ವಾತೆ–1)

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪತ್ತಿನ ಸಹಕಾರಿ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 208 ಸಿಎಲ್‌ಎಸ್ 2014, ದಿನಾಂಕ: 19–08–2014.
2. ಸರ್ಕಾರದ ಆದೇಶ ಸಂಖ್ಯೆ: ಸಿಒ 22 ಆಂಆಸ 2015, ಬೆಂಗಳೂರು, ದಿನಾಂಕ: 08–05–2015.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಕೆಎಂಈ–8/1/2015–16, ದಿನಾಂಕ: 17–02–2016.

**ಪ್ರಸ್ತಾವನೆ :–**

ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಹಕಾರಿ ಸಂಸ್ಥೆಗಳ ಮೂಲಕ ಸಾಲಗಳನ್ನು ನೀಡುವ ಯೋಜನೆ 2007–08 ರಿಂದ ಸಹಕಾರ ಇಲಾಖೆಯಲ್ಲಿ ಜಾರಿಯಲ್ಲಿರುತ್ತದೆ.

ಮೇಲೆ ಓದಲಾದ (1) ರ ಆದೇಶದಲ್ಲಿ ಈ ಯೋಜನೆಯನ್ನು 2014–15ನೇ ಸಾಲಿನಲ್ಲಿ ಮುಂದುವರಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2) ರ ಆದೇಶದಲ್ಲಿ ಸದರಿ ಯೋಜನೆಯನ್ನು 2015–16ನೇ ಸಾಲಿನಲ್ಲಿಯೂ ಮುಂದುವರೆಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಈ ಉದ್ದೇಶಕ್ಕಾಗಿ ₹. 8600 ಲಕ್ಷಗಳ ಅನುದಾನವನ್ನು ಒದಗಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ನಿಬಂಧಕರ ಪತ್ರದಲ್ಲಿ 2015–16ನೇ ಸಾಲಿಗೆ ಹಿಂದಿನ ವರ್ಷ ಅಂದರೆ 2014–15ನೇ ಸಾಲಿನ ಆದೇಶದಲ್ಲಿನ ಷರತ್ತುಗಳನ್ನೇ ಅಳವಡಿಸಿ ಆದೇಶ ಹೊರಡಿಸಲು ಕೋರಿ ಕರಡು ಆದೇಶದ ಪ್ರತಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ನಿಬಂಧಕರ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ 2015–16 ನೇ ಸಾಲಿಗೆ ಅನ್ವಯಿಸುವಂತೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಕೃಷಿ ಪತ್ತಿನ ಸಂಸ್ಥೆಗಳ ಮೂಲಕ ಶೇ. 4 ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯನ್ನು ಕಾರ್ಯಗತಗೊಳಿಸಲು ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 354 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 20–04–2016**

ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಅನ್ವಯಿಸುವ ಸಾಲಗಳನ್ನು ಒದಗಿಸಲು ಅನುಕೂಲವಾಗುವಂತೆ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು :**

1. ಈ ಯೋಜನೆಯು ದಿನಾಂಕ: 01–04–2015ರಿಂದ ಗೊತ್ತುಪಡಿಸಿದ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ಅಂದರೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಹಾಗೂ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಅವರ ಕಾರ್ಯವ್ಯಾಪ್ತಿಯೊಳಗೆ ಸ್ವಸಹಾಯ ಗುಂಪುಗಳಿಗೆ ನೀಡುವ ಗರಿಷ್ಠ ಐದು ವರ್ಷದ ಅವಧಿಗೆ ಹಾಗೂ ₹. 5.00 ಲಕ್ಷದವರೆಗಿನ ಸಂಪೂರ್ಣ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳಿಗೆ ಮಾತ್ರ ಅನ್ವಯಿಸುತ್ತದೆ.
2. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು /ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಂದ ಪಡೆದ ಸಾಲಗಳಿಗೆ ಸಂಬಂಧಿಸಿದಂತೆ ಸ್ವಸಹಾಯ ಗುಂಪುಗಳು ಪಾವತಿಸುವ ಶೇಕಡಾ 4ರ ಬಡ್ಡಿ ದರದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮಾರ್ಜಿನ್ ಹಾಗೂ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಅನ್ವಯಿಸುವ ಬಡ್ಡಿ ಸಹಾಯಧನವನ್ನು ಸರ್ಕಾರವು ಪ್ರತ್ಯೇಕವಾಗಿ ನಿಗಧಿಪಡಿಸಲಾಗುವುದು.
3. ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ನಬಾರ್ಡಿನ ಮಾರ್ಗದರ್ಶಿ ಸೂತ್ರಗಳಂತೆ ಸ್ವಸಹಾಯ ಗುಂಪುಗಳನ್ನು ಆಯ್ಕೆ ಮಾಡತಕ್ಕದ್ದು. ಅಂತಹ ಆಯ್ಕೆಗೆ ಮುಖ್ಯವಾಗಿ ಕೆಳಕಂಡ ಮಾನದಂಡಗಳನ್ನು ಪಾಲಿಸತಕ್ಕದ್ದು.
   - ಅ) ಸ್ವಸಹಾಯ ಗುಂಪು ರಚನೆಯಾಗಿ ಕನಿಷ್ಠ 6 ತಿಂಗಳ ಅವಧಿಗೆ ಕ್ರಿಯಾಶೀಲ ಅಸ್ತಿತ್ವದಲ್ಲಿರಬೇಕು.
   - ಆ) ಸ್ವಸಹಾಯ ಗುಂಪು ತನ್ನ ಸ್ವಂತ ಸಂಪನ್ಮೂಲಗಳಿಂದ ಉಳಿತಾಯ ಮತ್ತು ಸಾಲ ನೀಡಿಕೆ ವ್ಯವಹಾರಗಳನ್ನು ಯಶಸ್ವಿಯಾಗಿ ಕೈಗೊಂಡಿರಬೇಕು.
   - (ಇ) ಎಲ್ಲ ಸದಸ್ಯರೂ ಸಕ್ರಿಯಾವಾಗಿ ಭಾಗವಹಿಸಿ ಪ್ರಜಾಸತ್ತಾತ್ಮಕ ರೀತಿಯಲ್ಲಿ ಗುಂಪು ಕಾರ್ಯನಿರ್ವಹಿಸುತ್ತಿದೆ ಎಂಬುದು ಸ್ಪಷ್ಟವಾಗಿ ಕಂಡುಬರಬೇಕು.
   - (ಈ) ಸ್ವಸಹಾಯ ಗುಂಪು ಯುಕ್ತ ಲೆಕ್ಕಪತ್ರಗಳನ್ನು ಮತ್ತು ದಾಖಲೆಗಳನ್ನು ನಿರ್ವಹಿಸುತ್ತಿರಬೇಕು.
   - (ಉ) ಈ ಯೋಜನೆಯಡಿ ಭಾಗವಹಿಸಿ ಲಭ್ಯವಿರುವ ಸೌಲಭ್ಯಗಳನ್ನು ಪಡೆಯಲು ಮಾತ್ರ ಗುಂಪು ಅಸ್ತಿತ್ವಕ್ಕೆ ಬಂದಿಲ್ಲ ಎಂಬುದನ್ನು ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಖಾತ್ರಿಪಡಿಸಿಕೊಳ್ಳತಕ್ಕದ್ದು. ಸದಸ್ಯರು ಪರಸ್ಪರ ಸಹಾಯ ಮಾಡಿ ಒಟ್ಟಿಗೆ ಕೆಲಸ ಮಾಡುವ ನೈಜ ಅಗತ್ಯ ಇರಬೇಕು.
   - (ಊ) ಗುಂಪಿನ ಸದಸ್ಯರು ಸಾಮಾನ್ಯವಾಗಿ ಏಕರೂಪದ ಹಿನ್ನೆಲೆ ಮತ್ತು ಹಿತಾಸಕ್ತಿಗಳನ್ನು ಹೊಂದಿರಬೇಕು.
   - (ಋ) ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಸ್ವಸಹಾಯ ಗುಂಪಿನ ಕುಶಲತೆವರ್ಧನೆ ಮತ್ತು ಯುಕ್ತ ಕಾರ್ಯನಿರ್ವಹಣೆಗಾಗಿ ಅಗತ್ಯ ತರಬೇತಿ ಮತ್ತು ಇತರ ಬೆಂಬಲವನ್ನು ಕೊಡಬೇಕು.
4. ಈ ಯೋಜನೆಗೆ ಸಂಬಂಧಪಟ್ಟಂತೆ ನಬಾರ್ಡ್ ಕಾಲಕಾಲಕ್ಕೆ ಹೊರಡಿಸುವ ಮಾರ್ಗದರ್ಶಿ ಸೂತ್ರಗಳು ಯಥಾವತ್ತಾಗಿ ಅನ್ವಯವಾಗುತ್ತವೆ ಆದರೆ, ನಬಾರ್ಡ್‌ನ ಸುತ್ತೋಲೆಯ ಸಂಖ್ಯೆ : ಡಿಪಿಡಿ/101 ದಿನಾಂಕ: 26–02–1992 ರ ಅಂಶ 16ರಲ್ಲಿ ಉಲ್ಲೇಖಿಸಿರುವಂತೆ ಸ್ವಸಹಾಯ ಗುಂಪುಗಳ ಶಿಫಾರಸ್ಸಿನ ಆಧಾರದ ಮೇಲೆ ಸಹಕಾರ ಸಂಸ್ಥೆಗಳು ಸದಸ್ಯರಿಗೆ ನೇರವಾಗಿ ಸಾಲ ನೀಡಿದಲ್ಲಿ ಅಂತಹ ಸಾಲಗಳಿಗೆ ಪ್ರಸ್ತುತ ಯೋಜನೆಯು ಅನ್ವಯವಾಗುವುದಿಲ್ಲ.
5. ಸ್ವಸಹಾಯ ಗುಂಪುಗಳು ತಮ್ಮ ಸದಸ್ಯರಿಗೆ ಯಾವ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಬೇಕು ಎಂಬುದನ್ನು ನಿರ್ಧರಿಸಲು ಸಕ್ಷಮರಾಗಿದ್ದು, ಹಾಗೆ ನಿರ್ಧರಿಸುವ ಸಂದರ್ಭದಲ್ಲಿ ಬಡ್ಡಿ ದರಗಳು ಯುಕ್ತವಾಗಿರುವಂತೆ (reasonable) ಅಂದರೆ ಕರ್ನಾಟಕ ಮಿತಿಮೀರಿದ ಬಡ್ಡಿ ವಿಧಿಸುವಿಕೆಯ ನಿಷೇಧ ಅಧಿನಿಯಮ, 2004 ರನ್ವಯ ಇರುವಂತೆ ನೋಡಿಕೊಳ್ಳತಕ್ಕದ್ದು/ ಅಲ್ಲದೆ ಸಾಲ ಪಡೆದ ಸದಸ್ಯರು ಸಾಲಗಳನ್ನು ಸದುಪಯೋಗಪಡಿಸಿಕೊಳ್ಳುವಂತೆ ಮುಂಜಾಗ್ರತೆ ಕ್ರಮ ವಹಿಸತಕ್ಕದ್ದು.

6. ಈ ಯೋಜನೆಯಡಿ ಸರ್ಕಾರದ ಬದ್ದತೆಯು ಸಾಲಗಳ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ. ಅಂದರೆ ಸಾಲವನ್ನು ಸ್ವಸಹಾಯ ಗುಂಪುಗಳಿಗೆ ನೀಡಿದ ದಿನಾಂಕದಿಂದ ಸ್ವಸಹಾಯ ಗಂಪುಗಳು ಸಾಲ ಮರುಪಾವತಿಸಬೇಕಾದ ಗಡುವು ದಿನಾಂಕದವರೆಗೆ ಸೀಮಿತವಾಗಿರುತ್ತದೆ. ಆದಾಗ್ಯೂ, ಸ್ವಸಹಾಯ ಗುಂಪುಗಳು ನಿಗಧಿತ ದಿನಾಂಕದಂದು ಸಾಲ ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದಲ್ಲಿ , ಸರ್ಕಾರದ ಬದ್ಧತೆ ಇರುವುದಿಲ್ಲ. ಸ್ವಸಹಾಯ ಗುಂಪುಗಳು ಇಂತಹ ಮುದ್ದತ್ತು ಮೀರಿದ ಸಾಲ/ ಕಂತುಗಳನ್ನು ಸಾಮಾನ್ಯ ಬಡ್ಡಿ ದರದಲ್ಲಿ ಇತರ ವೆಚ್ಚಗಳೊಂದಿಗೆ ಮರುಪಾವತಿಸಬೇಕಾಗುತ್ತದೆ ಹಾಗೂ ನಂತರದ ಚಾಲ್ತಿ ಕಂತುಗಳಿಗೆ ಶೇಕಡಾ 4ರ ರಿಯಾಯಿತಿ ಸೌಲಭ್ಯಗಳು ದೊರೆಯುತ್ತದೆ. ಈ ಯೋಜನೆಯ ಅವಧಿಯಲ್ಲಿ ಬಡ್ಡಿ ಸಹಾಯಧನವು ಪೂರ್ಣವಾಗಿ ಮರುಪಾವತಿಯಾಗುವ ಸಾಲ / ಕಂತುಗಳಿಗೆ ಮಾತ್ರ ದೊರೆಯುತ್ತದೆ. ಈ ಸೌಲಭ್ಯವು ಸಾಲ ಮರುಪಾವತಿಯ ಗಡುವಿನ ದಿನಾಂಕ ಅಥವಾ ಪೂರ್ಣಾವಧಿ ಸಾಲ /ಕಂತು ಮರುಪಾವತಿಯಾದ ದಿನಾಂಕ ಇದರಲ್ಲಿ ಯಾವುದು ಮೊದಲೋ ಆ ಅವಧಿಗೆ ಬಡ್ಡಿ ಸಹಾಯಧನವು ದೊರೆಯುತ್ತದೆ. ಕೃಷಿ ಪತ್ತಿನ ಸಹಕಾರ ಸಂಘಗಳು ಬಡ್ಡಿ ಸಹಾಯಧನವನ್ನು ಸಂಬಂಧಿತ ಸಾಲಗಳ ವಸೂಲಾತಿ ಪ್ರಮಾಣವನ್ನಾಧರಿಸಿ, ಪ್ರತಿ ತ್ರೈಮಾಸಿಕ ಅವಧಿಗೆ ಬಿಲ್ಲುಗಳನ್ನು ಸಿದ್ಧಪಡಿಸಿ ಸಮುಚಿತ ಮಾರ್ಗದಲ್ಲಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

7. ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕ್, ಡಿ.ಸಿ.ಸಿ. ಬ್ಯಾಂಕುಗಳು ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಸ್ವಸಹಾಯ ಗುಂಪುಗಳಿಗೆ ಸಾಲವನ್ನು ಶೇಕಡಾ 4ರ ಬಡ್ಡಿ ದರದಲ್ಲಿ ಒದಗಿಸಲು ಅಗತ್ಯವಾದ ಕ್ರಮವನ್ನು ಕೈಗೊಳ್ಳತಕ್ಕದ್ದು.

8. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

9. ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಕ್ಲೈಂ ಬಿಲ್ಲುಗಳನ್ನು ವಿಳಂಭವಿಲ್ಲದೆ ಸಕಾಲದಲ್ಲಿ ದೃಢೀಕರಿಸಿ, ಕ್ಲೈಂಗೆ ಸಲ್ಲಿಸಲು ಅಗತ್ಯ ಸೂಚನೆಗಳನ್ನು ಸಂಬಂಧಪಟ್ಟವರಿಗೆ ನೀಡತಕ್ಕದ್ದು.

10. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡಿದ ಸೂಚನೆಗಳನ್ನು ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ಪಾಲಿಸತಕ್ಕದ್ದು.

11. ಪಿಎಸಿಎಸ್‌ಗಳ ಮತ್ತು ಡಿಸಿಸಿ ಬ್ಯಾಂಕುಗಳ ಕ್ಲೈಮು ಬಿಲ್ಲುಗಳನ್ನು ಡಿಸಿಸಿ ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರು ತಯಾರಿಸಿ ಸಂಬಂಧಪಟ್ಟ ಜಿಲ್ಲಾ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರಿಂದ ಪ್ರಮಾಣಿಕರಿಸಿದ ನಂತರ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು. ಕೃಷಿ ಪತ್ತಿನ ಸಹಕಾರ ಸಂಘಗಳು ವಾಣಿಜ್ಯ ಬ್ಯಾಂಕುಗಳಿಗೆ ಅಧ್ಯರ್ಪಿತಗೊಂಡಿದ್ದಲ್ಲಿ ಅಂತಹ ಬಿಲ್ಲುಗಳನ್ನು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ಸಂಬಂಧಪಟ್ಟ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

12. ಪಿಎಸಿಎಸ್‌ಗಳಿಗೆ / ಡಿಸಿಸಿ ಬ್ಯಾಂಕುಗಳಿಗೆ ಸಂಬಂಧಿಸಿದ ಕ್ಲೇಮು ಬಿಲ್ಲುಗಳನ್ನು ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

13. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಕ್ಲೇಮು/ಪುನರ್ಭರಣ ಕ್ಲೇಮುಗಳನ್ನು ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಮತ್ತು ನಿಗಧಿತ ನಮೂನೆಯಲ್ಲಿ ಕ್ರೋಢೀಕೃತ ಉಪಯೋಗ ಪ್ರಮಾಣ ಪತ್ರಗಳನ್ನು ಸರ್ಕಾರಕ್ಕೆ ಮತ್ತು ಮಹಾಲೇಖಪಾಲರಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 322**
**S.C. 100**

**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3
ಸಹಕಾರ ಇಲಾಖೆ

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಲೋಕೋಪಯೋಗಿ ವೃತ್ತ ಶಿವಮೊಗ್ಗ ವ್ಯಾಪ್ತಿಯಲ್ಲಿ ಬರುವ ಕಛೇರಿಗಳನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಲೋಕೋಪಯೋಗಿ ಇಲಾಖೆ, ಧಾರವಾಡ ವಲಯ ಕಛೇರಿ ವ್ಯಾಪ್ತಿಗೆ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014, ದಿನಾಂಕ: 02–11–2015 ಮತ್ತು ದಿನಾಂಕ: 08–01–2016.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎನ್/ಸಿ–3/ಮುಇಂಕಗು/ಸೃಜಿಸುವ/2015–16/12330, ದಿನಾಂಕ: 22–08–2016.

**ಪ್ರಸ್ತಾವನೆ :–**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ಸಂಖ್ಯೆ: ಲೋಇ 702 ಸೇಸಎ 2014, ದಿನಾಂಕ: 02–11–2015 ಮತ್ತು ದಿನಾಂಕ: 08–01–2016ರಲ್ಲಿ ಲೋಕೋಪಯೋಗಿ ವೃತ್ತ, ಕಲಬುರಗಿ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನದಲ್ಲಿ ತಾಂತ್ರಿಕ/ಆಡಳಿತಾತ್ಮಕ ಅನುಮೋದನೆಯನ್ನು ಶೀಘ್ರಗೊಳಿಸಿ ಹಾಗೂ ಕಾಮಗಾರಿಗಳನ್ನು ಸುಗಮವಾಗಿ ಅನುಷ್ಠಾನಗೊಳಿಸುವ ಹಿತದೃಷ್ಠಿಯಿಂದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ (ಈಶಾನ್ಯ) ಕಲಬುರಗಿ ಇಲ್ಲಿ ನೂತನವಾಗಿ ವಲಯ ಕಛೇರಿಯನ್ನು ಸೃಜಿಸಲಾಗಿರುತ್ತದೆ. ಸದರಿ ವಲಯ ಕಛೇರಿಯ ವ್ಯಾಪ್ತಿಯಲ್ಲಿ ಲೋಕೋಪಯೋಗಿ ವೃತ್ತ, ಕಲಬುರಗಿ ವ್ಯಾಪ್ತಿಯಲ್ಲಿ ಬರುವ 1) ಲೋಕೋಪಯೋಗಿ ವಿಭಾಗ, ಕಲಬುರಗಿ, 2) ಲೋಕೋಪಯೋಗಿ ವಿಭಾಗ,

ಯಾದಗಿರಿ, 3) ಲೋಕೋಪಯೋಗಿ ವಿಭಾಗ, ಬೀದರ್ ಮತ್ತು 4) ಲೋಕೋಪಯೋಗಿ ವಿಭಾಗ, ಸೇಡಂ ವಿಭಾಗಗಳು ಹಾಗೂ ಲೋಕೋಪಯೋಗಿ ವೃತ್ತ, ಬಳ್ಳಾರಿ ವ್ಯಾಪ್ತಿಯಲ್ಲಿ ಬರುವ 1) ಲೋಕೋಪಯೋಗಿ ವಿಭಾಗ, ಬಳ್ಳಾರಿ, 2) ಲೋಕೋಪಯೋಗಿ ವಿಭಾಗ, ಹೂವಿನಹಡಗಲಿ, 3) ಲೋಕೋಪಯೋಗಿ ವಿಭಾಗ, ರಾಯಚೂರು ಮತ್ತು 4) ಲೋಕೋಪಯೋಗಿ ವಿಭಾಗ, ಕೊಪ್ಪಳ ವಿಭಾಗಗಳನ್ನು ಸೇರ್ಪಡೆಗೊಳಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (2)ರಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು, ಲೋಕೋಪಯೋಗಿ ಇಲಾಖೆ (ಈಶಾನ್ಯ), ಕಲಬುರಗಿ ಇಲ್ಲಿ ಹೊಸದಾಗಿ ವಲಯ ಕಛೇರಿಯನ್ನು ಸೃಜಿಸಿ ಕಲಬುರಗಿ ವೃತ್ತ ಮತ್ತು ಬಳ್ಳಾರಿ ವೃತ್ತಗಳನ್ನು ಇದರ ಕಾರ್ಯವ್ಯಾಪ್ತಿಗೆ ಒಳಪಡಿಸಿರುವುದರಿಂದ ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ಆಡಳಿತ ವ್ಯಾಪ್ತಿಯಲ್ಲಿ ಕೇವಲ 2 ವೃತ್ತಗಳು ಅಂದರೆ, ಲೋಕೋಪಯೋಗಿ ವೃತ್ತ, ಧಾರವಾಡ ಮತ್ತು ಲೋಕೋಪಯೋಗಿ ವೃತ್ತ, ಬೆಳಗಾವಿ ಕಾರ್ಯವ್ಯಾಪ್ತಿಗಳು ಮಾತ್ರ ಇರುತ್ತದೆ. ಇದರಿಂದಾಗಿ ಧಾರವಾಡ ವಲಯದ ಕಾರ್ಯಕ್ಷೇತ್ರವು ತುಂಬಾ ಕಡಿಮೆಯಾಗಿರುತ್ತದೆ. ಆದುದರಿಂದ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ವಲಯ ಕಛೇರಿ ವ್ಯಾಪ್ತಿಯಲ್ಲಿ ಬರುವ ಶಿವಮೊಗ್ಗ ಮತ್ತು ಮಂಗಳೂರು ವೃತ್ತಗಳನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ವಲಯ ಕಛೇರಿಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ವಲಯ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 702, ಸೇಸಏ 2014, ಬೆಂಗಳೂರು, ದಿನಾಂಕ: 11-04-2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ವಲಯದ ಲೋಕೋಪಯೋಗಿ ವೃತ್ತ ಶಿವಮೊಗ್ಗ ಮತ್ತು ಅದರ ವ್ಯಾಪ್ತಿಯಲಿ ಬರುವ (1) ಲೋಕೋಪಯೋಗಿ ವಿಭಾಗ, ಶಿವಮೊಗ್ಗ, (2) ಲೋಕೋಪಯೋಗಿ ವಿಶೇಷ ವಿಭಾಗ, ಶಿವಮೊಗ್ಗ, (3) ಲೋಕೋಪಯೋಗಿ ವಿಭಾಗ, ದಾವಣಗೆರೆ ಮತ್ತು (4) ಲೋಕೋಪಯೋಗಿ ವಿಭಾಗ, ಚಿತ್ರದುರ್ಗ ಕಛೇರಿಗಳನ್ನು ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡ ವಲಯದ ವ್ಯಾಪ್ತಿಗೆ ಸೇರ್ಪಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮರಿಯಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಸೇವೆಗಳು-ಎ)

P.R. 323
S.C. 250

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ಪಟ್ಟಣದ ಮಧ್ಯದಲ್ಲಿರುವ 230'x220' ಅಂದಾಜು 1.06 ಎಕರೆ ಗುಂಟೆ ಅರಣ್ಯ ಇಲಾಖೆಯ ಜಮೀನನ್ನು ಸಾರ್ವಜನಿಕ ಬಸ್ ನಿಲ್ದಾಣದ ವಿಸ್ತರಣೆಗಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದವರಿಗೆ ಬಿಟ್ಟುಕೊಡುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಪಡೆ ಮುಖ್ಯಸ್ಥರು), ಇವರ ಪತ್ರ ಸಂಖ್ಯೆ: ಡಿ1/ಬಿಯುಡಿ/ಸಿಆರ್-279/2010-11, ದಿನಾಂಕ: 09-02-2016.

**ಪ್ರಸ್ತಾವನೆ :-**

ಮೇಲೆ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರುರವರು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ಪಟ್ಟಣದ ಮಧ್ಯದಲ್ಲಿರುವ 230'x220' ಅಂದಾಜು 1.06 ಎಕರೆ ಗುಂಟೆ ಅರಣ್ಯ ಇಲಾಖೆಯ ಜಮೀನನ್ನು ಸಾರ್ವಜನಿಕ ಬಸ್ ನಿಲ್ದಾಣದ ವಿಸ್ತರಣೆಗಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದವರಿಗೆ ಬಿಟ್ಟುಕೊಡುವ ಕುರಿತು ಈ ಕೆಳಕಂಡ ಅಂಶಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1. ಹೊಳಲ್ಕೆರೆ ಪಟ್ಟಣದ ಮಧ್ಯ ಭಾಗದಲ್ಲಿ ಅರಣ್ಯ ಇಲಾಖೆಗೆ ಸೇರಿರುವ 1 ಎಕರೆ 06 ಗುಂಟೆ ವಿಸ್ತೀರ್ಣದ ಜಾಗವನ್ನು ಸಾರ್ವಜನಿಕ ಬಸ್ ನಿಲ್ದಾಣದ ವಿಸ್ತರಣೆ ಮತ್ತು ಅಭಿವೃದ್ಧಿಗಾಗಿ ಬಿಟ್ಟುಕೊಡಲು,
2. ಮೇಲಿನ ಪ್ರಸ್ತಾಪಕ್ಕೆ ಒಪ್ಪಿಗೆ ನೀಡುವುದಾದಲ್ಲಿ ಜಿಲ್ಲಾಧಿಕಾರಿ, ಚಿತ್ರದುರ್ಗ ಇವರು ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಎಲ್ಎನ್‌ಡಿ/ಸಿಆರ್. 125/2014-15, ನಂ. ಎಲ್ಎನ್‌ಡಿ/ ಸಿಆರ್. 199/2014-15, ದಿನಾಂಕ: 25-07-2015 ರಲ್ಲಿ ಕಸಬಾ ಹೋಬಳಿ ಹಳೇಹಳ್ಳಿ ಗ್ರಾಮದ ಸರ್ವೆ ನಂ:63 ರಲ್ಲಿ 2.00 ಎಕರೆ ಜಾಗವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ಇವರ ಹೆಸರಿಗೆ ವರ್ಗಾಯಿಸಿರುವುದನ್ನು ಒಪ್ಪಿಕೊಂಡು ಸದರಿ 2.00 ಎಕರೆ ಜಾಗವನ್ನು ಅರಣ್ಯ ಇಲಾಖೆಯ ವಶಕ್ಕೆ ಪಡೆಯಲು ಹಾಗೂ
3. ಈ ಸ್ಥಳದಲ್ಲಿ ಇಲಾಖೆಯ ಅನುಕೂಲಕ್ಕೆ ತಕ್ಕಂತೆ ನಿರ್ಮಿಸಬೇಕಾದ ಹೊಸ ಕಟ್ಟಡಗಳಿಗಾಗಿ ಯೋಜನೆ ಲೆಕ್ಕ ಶೀರ್ಷಿಕೆ 4406-01-070-0-02 Building -147-Land and Buildings ಇದರಡಿ ಅಥವಾ ಸೂಕ್ತ ಲೆಕ್ಕ ಶೀರ್ಷಿಕೆಯಡಿ ಒಟ್ಟು ₹. 11.60 ಕೋಟಿ ಹೆಚ್ಚುವರಿ ಅನುದಾನವನ್ನು ಬಿಡುಗಡೆ ಮಾಡಿಸಿಕೊಡುವಂತೆ ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 15 ಎಫ್ಎಲ್ಎಲ್ 2016, ಬೆಂಗಳೂರು, ದಿನಾಂಕ: 13-04-2016**

ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ಪಟ್ಟಣದ ಮಧ್ಯದಲ್ಲಿರುವ ಅಂದಾಜು 1.06 ಎಕರೆ ಗುಂಟೆ ಅರಣ್ಯ ಇಲಾಖೆಯ ಜಾಗವನ್ನು ಕಟ್ಟಡಗಳ ಸಮೇತ ಸಾರ್ವಜನಿಕ ಬಸ್ ನಿಲ್ದಾಣದ ವಿಸ್ತರಣೆಗಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದವರಿಗೆ ಈ ಕೆಳಕಂಡ ಷರತ್ತುಗಳನ್ನು ಪೂರ್ಣಗೊಳಿಸುವ

ನಿರ್ಬಂಧನೆಗಳೊಂದಿಗೆ ತಾತ್ವಿಕವಾಗಿ (in principal) ಅನುಮೋದನೆಯೊಂದಿಗೆ ಹಸ್ತಾಂತರಿಸಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರಿಗೆ (ಅಪರ ಪಡೆ ಮುಖ್ಯಸ್ಥರು) ಬೆಂಗಳೂರು ಅವರಿಗೆ ಸರ್ಕಾರ ಮಂಜೂರಾತಿ ನೀಡಿದೆ.

1) ಜಿಲ್ಲಾಧಿಕಾರಿ, ಚಿತ್ರದುರ್ಗ ಇವರು ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: : ಎಲ್‌ಎನ್‌ಡಿ/ಸಿಆರ್. 125/2014–15, ನಂ. ಎಲ್‌ಎನ್‌ಡಿ/ ಸಿಆರ್. 199/2014–15, ದಿನಾಂಕ: 25–07–2015 ರಲ್ಲಿ ಕಸಬಾ ಹೋಬಳಿ ಹಳೇಹಳ್ಳಿ ಗ್ರಾಮದ ಸರ್ವೆ ನಂ:63 ರಲ್ಲಿ 2.00 ಎಕರೆ ಜಾಗವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿತ್ರದುರ್ಗ ಇವರ ಹೆಸರಿಗೆ ವರ್ಗಾಯಿಸಿ ಅರಣ್ಯ ಇಲಾಖೆಗೆ ಖಾತೆ ಮತ್ತು ಮ್ಯುಟೇಶನ್ ದಾಖಲಿಸುವುದು.
2) ಅರಣ್ಯ ಇಲಾಖೆಯ ಕಛೇರಿ ಹಾಗೂ ವಸತಿಗೃಹ ನಿರ್ಮಿಸಲು ಸಮಾಜ ಕಲ್ಯಾಣ ಇಲಾಖೆಯಿಂದ SCP& TSP ಅನುದಾನದಿಂದ ₹. 4 ಕೋಟಿ (₹. ನಾಲ್ಕು ಕೋಟಿಗಳು ಮಾತ್ರ) ಹಣವನ್ನು ಅರಣ್ಯ ಇಲಾಖೆಗೆ ಜಮಾ ಮಾಡುವುದು.

**P.R. 324**
**S.C. 60**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಶಾರದ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಹಾವೇರಿ ತಾಲ್ಲೂಕು ಹಾವೇರಿ ನಗರ ಸ.ನಂ. 105ರಲ್ಲಿ 2–33–00 ಎಕರೆ ಪ್ರದೇಶವನ್ನು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡಕ್ಕಾಗಿ ಕಾರ್ಮಿಕ ಇಲಾಖೆ ಇವರಿಗೆ ನೀಡುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಪಡೆ ಮುಖ್ಯಸ್ಥರು) ಇವರ ಪತ್ರ ಸಂಖ್ಯೆ: ಎ5(2) ಜಿ.ಎಫ್.ಎಲ್.ಸಿಆರ್. 3/2014–15, ದಿನಾಂಕ: 03–02–2016.

**ಪ್ರಸ್ತಾವನೆ :–**

ಮೇಲೆ ಓದಲಾದ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ಅರಣ್ಯ ಪಡೆ ಮುಖ್ಯಸ್ಥರು) ರವರ ಪತ್ರದಲ್ಲಿ ಹಾವೇರಿ ತಾಲ್ಲೂಕು, ಹಾವೇರಿ ನಗರಕ್ಕೆ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯು ಮಂಜೂರು ಆಗಿದ್ದು, ಇದಕ್ಕಾಗಿ ಕಟ್ಟಡ ನಿರ್ಮಾಣ ಮಾಡಲು ಸ್ಥಳ ಅವಶ್ಯಕತೆ ಇರುವುದರಿಂದ ಹಾವೇರಿ ನಗರ ಸ. ನಂ. 105ರಲ್ಲಿ 2–33–00 ಎಕರೆ ಪ್ರದೇಶದಲ್ಲಿ ಈ ಹಿಂದೆ ನಿರ್ಮಿಸಿರುವ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ವಸತಿ ಗೃಹ ಹಾಗೂ ಸಿಬ್ಬಂದಿಗಳ ವಸತಿ ಗೃಹ ಕಟ್ಟಡಗಳ ಸಮೇತ 2–33–00 ಎಕರೆ ಪ್ರದೇಶವನ್ನು ಕಾರ್ಮಿಕ ಇಲಾಖೆಗೆ ವಹಿಸಿಕೊಡಬೇಕೆಂದು ಕೋರಲಾಗಿದೆ.

ಹಾವೇರಿ ನಗರ ಸ.ನಂ. 105 ರಲ್ಲಿ 2–33–00 ಎಕರೆ ಪ್ರದೇಶದಲ್ಲಿ ನಿರ್ಮಿಸಿರುವ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ವಸತಿ ಗೃಹ ಹಾಗೂ ಸಿಬ್ಬಂದಿಗಳ ವಸತಿ ಗೃಹ ಕಟ್ಟಡಗಳು ಶಿಥಿಲಾವಸ್ಥೆಯಲ್ಲಿದ್ದು, ಬೀಳುವ ಹಂತದಲ್ಲಿರುವುದರಿಂದ ನಿರುಪಯುಕ್ತವಾಗಿರುತ್ತವೆ ಎಂದು ವರದಿಯಲ್ಲಿ ತಿಳಿಸಿದ್ದಾರೆ.

ಜಿಲ್ಲಾ ಸರ್ಕಾರಿ ಕಛೇರಿಗಳ ಸಂಕೀರ್ಣದಲ್ಲಿ ಹಾಲಿ ಇರುವ ವಿಭಾಗ ಕಛೇರಿಯ ಜಾಗವು ತುಂಬಾ ಸಣ್ಣದಿದ್ದು, ಅಲ್ಲದೆ ಹಾವೇರಿ ಶಹರದಲ್ಲಿರುವ ವಲಯ ಕಛೇರಿಯ ಜಾಗವು ಸಹ ತುಂಬ ಚಿಕ್ಕದಿದ್ದು, ಹಾವೇರಿ ಹತ್ತಿರ ಇರುವ ಸೂಕ್ತ ಪ್ರದೇಶಕ್ಕೆ ಸ್ಥಳಾಂತರಿಸಬಹುದಾಗಿರುತ್ತದೆ. ಹಾಗೂ ಹಾವೇರಿ ನಗರದಲ್ಲಿರುವ ಬೇರೆ ಇಲಾಖೆಗೆ ಹಸ್ತಾಂತರಿಸಬಹುದಾಗಿದೆ ಎಂದು ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಧಾರವಾಡ ವೃತ್ತ, ಧಾರವಾಡ ಇವರು ವರದಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಕಾರ್ಯಕಾರಿ ನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಹಾವೇರಿ ಇವರು ನಿರ್ಧರಿಸಿರುವಂತೆ ಈಗಿರುವ ಕಟ್ಟಡಗಳ ಮೌಲ್ಯವನ್ನು ₹. 6,11,663/– ಗಳನ್ನು ಕಾರ್ಮಿಕ ಇಲಾಖೆಯು ಪಾವತಿಸಿದ ನಂತರ 2–33–00 ಎಕರೆ ಅರಣ್ಯ ಭೂಮಿಯನ್ನು ಕಾರ್ಮಿಕ ಇಲಾಖೆಗೆ ಹಸ್ತಾಂತರಿಸುವ ಬಗ್ಗೆ ಪ್ರಮುಅಸಂ (ಅಪಮು) ಸರ್ಕಾರದ ಆದೇಶ ಕೋರಿರುತ್ತಾರೆ ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 23 ಎಫ್‌ಎಲ್‌ಎಲ್ 2016, ಬೆಂಗಳೂರು, ದಿನಾಂಕ: 05–04–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ತಾಲ್ಲೂಕು, ಹಾವೇರಿ ನಗರಕ್ಕೆ ಮಂಜೂರಾಗಿರುವ ಸರ್ಕಾರಿ ಕೈಗಾರಿಕಾ ತರಬೇತಿ ಕೇಂದ್ರ ನಿರ್ಮಾಣಕ್ಕಾಗಿ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರ ವಸತಿ ಗೃಹ ಹಾಗೂ ಸಿಬ್ಬಂದಿಗಳ ವಸತಿ ಕಟ್ಟಡಗಳ ಸಮೇತ ಹಾವೇರಿ ನಗರ ಸ. ನಂ. 105ರಲ್ಲಿ 2–33–00 ಎಕರೆ ಪ್ರದೇಶವನ್ನು ಕಾರ್ಮಿಕ ಇಲಾಖೆಯು ₹. 6,11,663/– ಮೊತ್ತವನ್ನು ಅರಣ್ಯ ಇಲಾಖೆಗೆ ಬಿಡುಗಡೆ ಮಾಡಿದ ನಂತರವೇ ಭೂಮಿ ಮತ್ತು ವಸತಿ ಗೃಹಗಳನ್ನು ಕಾರ್ಮಿಕ ಇಲಾಖೆಗೆ ಹಸ್ತಾಂತರಿಸಬಹುದು ಎಂಬ ಷರತ್ತುಗಳನ್ನು ವಿಧಿಸಿ ಸರ್ಕಾರ ಪ್ರಮುಅಸಂ (ಅಪಮು) ಅವರಿಗೆ ಮಂಜೂರಾತಿ ನೀಡಿದೆ.

**P.R. 325**
**S.C. 60**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಶಾರದ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಹೊಸ ಕೆನೆಪದರ ಮತ್ತು ಭಾರತದ ಸಂವಿಧಾನದ ಅನುಚ್ಛೇದ 15(4)ರಂತೆ ವಿದ್ಯಾ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ 16(4)ರ ಮೇರೆಗೆ ನೇಮಕಾತಿ ಮೀಸಲಾತಿಗಳು–ಆದೇಶಕ್ಕೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂ. ಸಕಇ 225 ಬಿಸಿಎ 2000, ದಿನಾಂಕ 30–03–2002.

2) ಸರ್ಕಾರದ ಆದೇಶ ಸಂ. ಸಕಇ 104 ಬಿಸಿಎ 2011, ದಿನಾಂಕ 06–02–2012.

3) ಸರ್ಕಾರದ ಆದೇಶ ಸಂ. ಹಿಂವಕ 192 ಬಿಸಿಎ 2013, ದಿನಾಂಕ 04–09–2013.

4) ಸರ್ಕಾರದ ಆದೇಶ ಸಂ. ಹಿಂವಕ 148 ಬಿಸಿಎ 2015, ದಿನಾಂಕ 04–06–2015.

5) ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಮಧ್ಯಂತರ ವರದಿ –2005.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಭಾರತದ ಸಂವಿಧಾನದ ಅನುಚ್ಛೇದ 15(4)ರಂತೆ ವಿದ್ಯಾ ಸಂಸ್ಥೆಗಳಲ್ಲಿ ಪ್ರವೇಶ ಮತ್ತು ಅನುಚ್ಛೇದ 16(4)ರ ಮೇರೆಗೆ ನೇಮಕಾತಿ ಮೀಸಲಾತಿಗಳನ್ನು ಪಡೆಯಲು ಹಿಂದುಳಿದ ವರ್ಗಗಳ ಪರಿಷ್ಕೃತ ಪಟ್ಟಿಯನ್ನು ಸದರಿ ಆದೇಶದ ಅನುಬಂಧ–1ರಲ್ಲಿ ಹಾಗೂ ಈ ಮೀಸಲಾತಿಯನ್ನು ಪಡೆಯಲು ಅರ್ಹರಲ್ಲದ ವ್ಯಕ್ತಿಗಳನ್ನು ಗುರುತಿಸಲು ಸಮಗ್ರ ಕೆನೆಪದರ ನೀತಿಯನ್ನು ಅನುಬಂಧ–2ರಲ್ಲಿ ಪ್ರಕಟಿಸಲಾಗಿದೆ. ಮೇಲೆ (2) ರಿಂದ (4)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಹೊಸ ಕೆನೆಪದರ ನೀತಿಯ ಅಂಶ 3ರಲ್ಲಿ ನಿಗಧಿಪಡಿಸಿರುವ ವಾರ್ಷಿಕ ಆದಾಯದ ಮಿತಿಯನ್ನು ಕಾಲ ಕಾಲಕ್ಕೆ ಪರಿಷ್ಕರಿಸಲಾಗಿದ್ದು, ಪ್ರಸ್ತುತ ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ಈ ವಾರ್ಷಿಕ ಆದಾಯದ ಮಿತಿಯನ್ನು ರೂ.6.00 ಲಕ್ಷಗಳಿಗೆ ಹೆಚ್ಚಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಮಧ್ಯಂತರ ವರದಿ 2005ರ ಸಲಹೆ ಸಂ.25ರಲ್ಲಿ, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ಅನುಬಂಧ–1ರಲ್ಲಿ ಪ್ರವರ್ಗ–2ಎ ಅಡಿಯ ಕ್ರ.ಸಂ.8(ಎ)ರಲ್ಲಿ "ನಾಯಿಂದ' ಉಪ ಜಾತಿಯಾಗಿ ಕ್ರ.ಸಂ. 8(ಹೆಚ್)ನಲ್ಲಿರುವ 'ಹಜಾಮ' ಎಂಬ ಪದವನ್ನು ತೆಗೆದುಹಾಕಬೇಕೆಂದು ಕ್ರ.ಸಂ. 8(ಎ)ಯ 'ನಾಯಿಂದ' ಎಂಬ ಜಾತಿಯ ಹೆಸರಿನ ಬದಲು 'ಸವಿತಾ' ಜಾತಿಯೆಂದು ಸೇರಿಸಿ ಅದರ ಜೊತೆಗೆ ಇತರೆ 25 ಉಪ ಜಾತಿ ಹೆಸರುಗಳನ್ನು ಮೀಸಲಾತಿ ಪಟ್ಟಿಯಲ್ಲಿ ಪ್ರಕಟಿಸಬೇಕೆಂದು ಮತ್ತು ಈಗಾಗಲೇ 'ಹಜಾಮ' ಎಂಬ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದಿರುವವರಿಗೆ 'ಸವಿತಾ' ಎಂದು ಜಾತಿ ಪ್ರಮಾಣ ಪತ್ರಗಳನ್ನು ನೀಡುವಂತೆ ಆದೇಶ ಹೊರಡಿಸಬೇಕೆಂದು ಸರ್ಕಾರಕ್ಕೆ ಸಲಹೆ ಮಾಡಿರುತ್ತದೆ. ಆಯೋಗದ ಸಲಹೆಯನ್ನು ಒಪ್ಪಿಕೊಂಡು ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂ. ಹಿಂವಕ 78 ಬಿಸಿಎ 2016, ಬೆಂಗಳೂರು, ದಿನಾಂಕ:28–06–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು, ಆದೇಶ ಸಂ. ಸಕಇ 225 ಬಿಸಿಎ 2000, ದಿನಾಂಕ 30–03–2002ರ ಅನುಬಂಧ–1ರ ಪ್ರವರ್ಗ II(ಎ)ರ ಕ್ರ.ಸಂ.8ರಲ್ಲಿ ಸೂಚಿಸಲಾದ ಎಲ್ಲಾ ವಿವರಗಳಿಗೆ ಈ ಕೆಳಗಿನಂತೆ ತಿದ್ದುಪಡಿ ಮಾಡಿ ಪ್ರತಿಷ್ಠಾಪಿಸಲಾಗಿದೆ.

| ಕ್ರ. ಸಂ. | ಜಾತಿಯ ಹೆಸರು |
|---|---|
| 8 (a) | * |
| (b) | ಪರಿಯಾಳ (ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆ) |
| (c) | ಅಂಬಟ್ಟನ್ |
| (d) | ಬಜಂತ್ರಿ |
| (e) | ಬಂಡಾರಿ |
| (f) | ಚೌರಿಯ |
| (g) | ಹಡಪದ |
| (h) | * |
| (i) | ಕವುಟಿಯನ್ |
| (j) | ಕೆಲಸಿ |
| (k) | ಕ್ಷೌರಿಕ |
| (l) | ಕ್ಷೌರದ್ |
| (m) | ಮಹಾಲೆ |
| (n) | ಮಂಗಳ |
| (o) | ಮೇಲಗಾರ |
| (p) | ನಾಡಿಗ |
| (q) | ನಾಪಿತ |
| (r) | ನವಲಿಗ್ |
| (s) | ನಾವಿ |
| (t) | ನಯನಜ ಕ್ಷತ್ರಿಯ |
| (u) | ನ್ಹಾವಿ |
| (v) | ವಾಜಾಂತ್ರಿ (ಉತ್ತರ ಕನ್ನಡ ಜಿಲ್ಲೆ) |
| (w) | ಸವಿತ |

| | |
|---|---|
| (x) | ನಯನಜ ಕ್ಷತ್ರಿ |
| (y) | ನಾಡಿಗ್ |
| (z) | ಕ್ಷೌರಿಕ್ |
| (aa) | ಕ್ಷೌರಿಕ |

* 'ನಾಯಿಂದ' ಮತ್ತು 'ಹಜಾಮ' ಪದಗಳನ್ನು ತೆಗೆದುಹಾಕಲಾಗಿದೆ.

ಮುಂದುವರೆದು, ಈಗಾಗಲೇ 'ನಾಯಿಂದ' ಮತ್ತು 'ಹಜಾಮ' ಎಂಬ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದಿರುವವರಿಗೆ 'ಸವಿತಾ' ಎಂದು ಈ ಆದೇಶ ಹೊರಡಿಸಿದ ದಿನಾಂಕದ ತರುವಾಯ, ಮಾರ್ಪಾಡು ಅಥವಾ ಹೊಸದಾದ ಜಾತಿ ಪ್ರಮಾಣ ಪತ್ರಗಳನ್ನು ನೀಡುವಂತೆ ಸಕ್ಷಮ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

**PR. 468**
**SC. 1000**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಆರ್. ಎರೆಕುಪ್ಪಿ,**
ಸರ್ಕಾರ ಅಧೀನ ಕಾರ್ಯದರ್ಶಿ–1,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject :** Diversion of 0.3633· ha. of forest land for the purpose of improvement of road from Gubbi to Beeragonahalli at Sy.No.1 of Nagegowdana byalada Kavalu Village of Turuvekere Taluk, Tumkur Forest Division and District in favour of the Executive Engineer, KSHIP Divsion, Tumkur - reg.

**Read :**
1) Principal Chief Conservator of Forests (Head of Forest Force), Bengaluru Letter No. A5(3).GFL CR.32/2011-12, dt. 05-12-2012.
2) Government of Karnataka Letter No. FEE 192 FLL 2012, dt. 20-04-2013.
3) Government of India, M/o Environment and Forests and Climate Change Letter No. F. No.4 KRB 954/2013/BAN/3734, dt.01-07-2015.
4) Principal Chief Conservator of Forests (Head of Forest Force), Bengaluru Letter No. A5(2) GFL CR. 32/2011-12, dt. 01-07-2015.
5) Government of Karnataka Letter No. FEE 192 FLL 2012, dt. 04-09-2015.
6) Government of India, M/o Environment and Forests and Climate Change Letter No. F.No. 4-KRB 954/2013/BAN/8155, dt.18-03-2016.

**Preamble:**

The Principal Chief Conservator of Forests (Head of Forest Force), Bengaluru vide letter under read at (1) had submitted a proposal for diversion of 0.3633 ha. of forest land for the purpose of improvement of road from Gubbi to Beeragonahalli at Sy.No.1 of Nagegowdanabyalada Kavalu Village of Turuvekere Taluk, Tumkur Forest Division and District in favour of the Executive Engineer, KSHIP Division, Tumkur.

After verification and examination, the proposal was recommended by Government of Karnataka and forwarded to Government of India to accord sanction u/s 2 of the Forest (Conservation) Act, 1980 vide letter under read at (2).

The Govt. of India, Ministry of Environment and Forests and Climate Change, Regional Office (Soutern Zone), Bengaluru vide its letter under read at (3) have accorded its in-principle (Stage-1) approval for the proposal subject to fulfillment of certain conditions and the same was communicated to the Principal Chief Conservator of Forests (Head of Forest Force), Bangalore with a direction to submit compliance report on fulfillment of conditions.

The Principal Chief Conservator of Forests (Head of Forest Force), Bengaluru vide tetter under read at (4) had furnished the compliance report and the same was forwarded to Govt of India vide letter under read at (5) and requested to obtain final approval of Government of India u/s 2 of the Forest (Conservation) Act, 1980.

The Government of India, Ministry of Environment and Forests & Climate Change, Regional Office (Southern Zone), Bengaluru vide letter read at (6) have accorded and communicated its final approval (Stage-II) for the proposal u/s 2 of the Forest (Conservation) Act, 1980 subject to certain conditions.

The proposal has been examined in detail and hence the order

**Government Order No. FEE 192 FLL 2012, Bengaluru, Dated: 03.05.2016**

In the circumstances as explained in the preamble above, Government are pleased to accord approval u/s 2 of Forest (Conservation) Act, 1980 for diversion of 0.3633 ha. of forest land for the purpose of improvement of road from Gubbi to Beeragonahalli at Sy.No.1 of Nagegowdanabyalada Kavalu Village of Turuvekere Taluk, Tumkur Forest Division and District in favour of the Executive Engineer, KSHIP Division, Tumkur subject to following conditions.

1. The legal status of forest land shall remain unchanged and it will continue to be as forest land.
2. Any other condition that the Additional Principal Chief Conservator of Forests (Central), Regional Office, Bengaluru may impose from time to time for protection, improvement of flora and fauna in the forest area and public convenience shall also be applicable.
3. Handing and taking over of land and commencement of work in the land shall be done within a period of two years from the date of Stage-II approval.
4. The DGPS readings of the 0.3633 ha. of the forest land diverted shall be communicated to O/o Govt. of India, M/o Environment and Forests, Regional Office (Southern Zone), Kendriya Sadan, 4th Floor, E and F Wings, 17th Main Road, 2nd Block, Koramangala, Bengaluru-560 034 within 30 days of transfer of the forest land.
5. Violation of any of the conditions shall invite penal action, as deemed fit by the Additional Principal Chief Conservator of Forests (Central), Regional Office, Bengaluru.
6. The lessee shall pay lease rent as fixed by the Government from time to time.
7. The lease tenure is for a period of 20 (twenty) years.
8. The leased out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Dept. under section 82 of Karnataka Forest Act, 1963. The concerned Deputy Conservator of Forests is authorized to take necessary action in this regard.
9. No structures/residential buildings shall be permitted in the proposed forest area.
10. The Karnataka Forest Act, 1963 and Rules, 1969 and other relevant Acts & Rules will be applicabie for any violation.
11. Avenue Plantation shall be taken up along the road on either side (200 plants per km.) at the project cost. The plantation shall be maintained at the project cost for 5 years. (At present the cost is Rs. 1911/- plant.
12. The user agency has to pay the Net Present Value (NPV) of forest land diverted under this proposal as per Orders dated: 28-3-2008 and 09-05-2008 of the Hon'ble Supreme Court of India and undertaking for additional amount of the Net Present Value if any.
13. The user agency shall ensure that there should be no damage to the available fauna and other flora.
14. The user agency should pay cost of soil erosion controlling measures, in accordance with the estimate prepared by the concerned DCFs, to be carried out at the adjacent forest areas all along the road.
15. The shoulder drains should be suitably covered with stone pitching in order to control soil erosion.
16. No crushing/breaking of stones shall be allowed inside forest area. Readymade material shall be used for improvement of such road.
17. Both sides of the improved road shall be reinforced with brick/stone works and vegetative measures to check soil erosion, at the project cost in consultation with the Deputy Conservator of Forests.
18. No labour camp shall be established on the forest land.
19. No work shall be allowed after sunset.
20. Any damage to forest area due to such improvement and widening works shall be compensated by the User Agency. The extent of damage shall be assessed by the concerned Deputy Conservator of Forests.
21. The user agency shall not sub-lease, mortgage or hypothecate the forest area.
22. The approval under the Forest (Conservation) Act, 1980 is subject to the clearance under the Environment (Protection) Act, 1986 if required.
23. The user agency shall abide by all the conditions imposed upon by the Government of India, the Government of Karnataka and the Principal Chief Conservator of Forests (Head of Forest Force).

**P.R. 363**
**SC – 100**

By order and in the name of the Governor of Karnataka
**L.SHARADA**
Under Secretary to Govt.,
Forest, Ecology and Environment Dept.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೆ.ಎಸ್.ಎಸ್.ಐ.ಡಿ.ಸಿ/ಕೆ.ಐ.ಎ.ಡಿ.ಬಿ., ಸಂಸ್ಥೆಗಳು ಅಭಿವೃದ್ಧಿಪಡಿಸುವ ಕೈಗಾರಿಕಾ ವಸಾಹತು/ಪ್ರದೇಶಗಳಲ್ಲಿ ನಿವೇಶನಗಳನ್ನು ವಿವಿಧ ವರ್ಗದ ಕೈಗಾರಿಕೋದ್ಯಮಿಗಳಿಗೆ ಮೀಸಲಾತಿ ನೀಡುವ ಬಗ್ಗೆ.

**ಓದಲಾಗಿದೆ :** (1) ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೈವಾಇ/ಕೈಅ/ಇ1/1455/2016–17, ದಿ: 15.04.2016.

(2) ಸರ್ಕಾರದ ಆದೇಶ ಸಂಖ್ಯೆ: ಸಿಐ 148 ಸಿಎಸ್‌ಸಿ 2015, ದಿನಾಂಕ: 27–06–2015.

ಪ್ರಸ್ತಾವನೆ :

2016–17ನೇ ಸಾಲಿನ ಆಯವ್ಯಯ ಭಾಷಣದ **ಕಂಡಿಕೆ 379ರಲ್ಲಿ "2014ರಲ್ಲಿ ತರಲಾದ ಕೈಗಾರಿಕಾ ನೀತಿಯಲ್ಲಿ ಕೆಐಎಡಿಬಿ ಸಂಸ್ಥೆಯು ಅಭಿವೃದ್ಧಿ ಪಡಿಸುವ ಕೈಗಾರಿಕಾ ಶೆಡ್ / ನಿವೇಶನಗಳಲ್ಲಿ ಶೇ.5ರಷ್ಟು ಹಿಂದುಳಿದ ವರ್ಗಗಳ ಪ್ರವರ್ಗ – 1 ಮತ್ತು 2ಎ, ಅಲ್ಪಸಂಖ್ಯಾತರಿಗೆ, ಅಂಗವಿಕಲರಿಗೆ ಮತ್ತು ಮಾಜಿ ಸೈನಿಕರಿಗೆ ಮೀಸಲಿರಿಸಲಾಗಿದ್ದು, ಇದನ್ನು ಶೇ.5 ರಿಂದ 10ಕ್ಕೆ ಹೆಚ್ಚಿಸಲಾಗುವುದು. ಈ ಮೀಸಲಾತಿಯನ್ನು ಕೆಐಎಡಿಬಿ ಮತ್ತು ಕೆಎಸ್ಎಸ್ಐಡಿಸಿ ಸಂಸ್ಥೆಗಳು ಅಭಿವೃದ್ಧಿಪಡಿಸಿ ಹಂಚಿಕೆ ಮಾಡುವ ಕೈಗಾರಿಕಾ ಶೆಡ್ / ನಿವೇಶನಗಳಿಗೆ ಅನ್ವಯಿಸಲಾಗುವುದು. ಈ ಮೊತ್ತವನ್ನು 6 ಸಮ ತ್ರೈಮಾಸಿಕ ಕಂತುಗಳಲ್ಲಿ ಪಾವತಿಸಬಹುದಾಗಿರುತ್ತದೆ"** ಎಂದು ಘೋಷಿಸಲಾಗಿದೆ. ಅದರಂತೆ, ವಿವಿಧ ವರ್ಗದ ಸಮುದಾಯಕ್ಕೆ ಸೇರಿದ ಕೈಗಾರಿಕೋದ್ಯಮಿಗಳಿಗೆ ಕೈಗಾರಿಕಾ ಪ್ರದೇಶ/ವಸಾಹತುಗಳಲ್ಲಿ ನಿವೇಶನ/ಶೆಡ್‌ಗಳ ಹಂಚಿಕೆಯಲ್ಲಿ ಮೀಸಲಾತಿ ನೀಡುವ ಕುರಿತು, ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಮೀಸಲಾತಿಯ ಪ್ರಮಾಣವನ್ನು ನಿಗದಿಪಡಿಸಲಾಗಿದ್ದು, ಈ ಮೀಸಲಾತಿಯ ಆದೇಶಕ್ಕೆ ಸೂಕ್ತ ತಿದ್ದುಪಡಿಗಳನ್ನು ತಂದು 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಣೆಯಾದಂತೆ ಮೀಸಲಾತಿ ಪ್ರಮಾಣವನ್ನು ಪರಿಷ್ಕರಿಸುವ ಕುರಿತು ಆಯುಕ್ತರು, ಕೈಗಾರಿಕಾಭಿವೃದ್ಧಿ ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಮುಂದಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 82 ಸಿಎಸ್‌ಸಿ 2016, ಬೆಂಗಳೂರು, ದಿನಾಂಕ: 05.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದ ಹೊಸ ಕೈಗಾರಿಕಾ ನೀತಿ 2014–15ರಲ್ಲಿ ಘೋಷಿಸಿರುವಂತೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ವತಿಯಿಂದ ಅಭಿವೃದ್ಧಿಪಡಿಸಲಾಗುವ ಹೊಸ ಕೈಗಾರಿಕಾ ಪ್ರದೇಶದಲ್ಲಿ ಹಂಚಿಕೆಗೆ ಅರ್ಹವಿರುವ ನಿವೇಶನಗಳ ಒಟ್ಟು ವಿಸ್ತೀರ್ಣದಲ್ಲಿ ಕನಿಷ್ಠ ಶೇ. 20ರಷ್ಟು ಭಾಗವನ್ನು ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ವರ್ಗದ (ಎಂಎಸ್ಎಂಇ) ಉದ್ದಿಮೆಗಳಿಗೆ ಮೀಸಲಿಡತಕ್ಕದ್ದು.

ಮುಂದುವರೆದು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆಐಎಡಿಬಿ) ಮತ್ತು ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದಿಂದ (ಕೆಎಸ್ಎಸ್ಐಡಿಸಿ) ಅಭಿವೃದ್ಧಿಪಡಿಸಲಾಗುವ ಹೊಸ ಕೈಗಾರಿಕಾ ಪ್ರದೇಶ / ವಸಾಹತುಗಳಲ್ಲಿನ ನಿವೇಶನ/ಶೆಡ್‌ಗಳ ಹಂಚಿಕೆಯಲ್ಲಿ ಈ ಕೆಳಕಂಡಂತೆ ಶೇಕಡವಾರು ಮೀಸಲಾತಿಯನ್ನು ಅನುಸರಿಸಿ ಹಂಚಿಕೆ ಮಾಡತಕ್ಕದೆಂದು ಆದೇಶಿಸಲಾಗಿದೆ.

- ಕೆ.ಎಸ್.ಎಸ್.ಐ.ಡಿ.ಸಿ. ಮತ್ತು ಕೆ.ಐ.ಎ.ಡಿ.ಬಿ. ಸಂಸ್ಥೆಗಳು ಅಭಿವೃದ್ಧಿಪಡಿಸುವ ಕೈಗಾರಿಕಾ ವಸಾಹತು/ಪ್ರದೇಶಗಳಲ್ಲಿ ಮಹಿಳಾ ಉದ್ದಿಮೆದಾರರಿಗೆ ಕನಿಷ್ಠ ಶೇ. 5ರಷ್ಟು ನಿವೇಶನ/ಶೆಡ್‌ಗಳನ್ನು ಮೀಸಲಿಡತಕ್ಕದ್ದು.
- ಕೆ.ಎಸ್.ಎಸ್.ಐ.ಡಿ.ಸಿ. ಮತ್ತು ಕೆ.ಐ.ಎ.ಡಿ.ಬಿ. ಸಂಸ್ಥೆಗಳು ಅಭಿವೃದ್ಧಿಪಡಿಸುವ ಕೈಗಾರಿಕಾ ವಸಾಹತು/ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಉದ್ದಿಮೆದಾರರಿಗೆ ಕನಿಷ್ಠ ಶೇ. 22.50ರಷ್ಟು ನಿವೇಶನ/ಶೆಡ್‌ಗಳನ್ನು ಮೀಸಲಿಡತಕ್ಕದ್ದು.
- ಕೆ.ಎಸ್.ಎಸ್.ಐ.ಡಿ.ಸಿ. ಮತ್ತು ಕೆ.ಐ.ಎ.ಡಿ.ಬಿ. ಸಂಸ್ಥೆಗಳು ಅಭಿವೃದ್ಧಿಪಡಿಸುವ ಕೈಗಾರಿಕಾ ವಸಾಹತು/ಪ್ರದೇಶಗಳಲ್ಲಿ ಅಲ್ಪಸಂಖ್ಯಾತ, ಹಿಂದುಳಿದ ವರ್ಗ (ವರ್ಗ–1 ಮತ್ತು 2ಎ), ವಿಕಲಚೇತನ ಹಾಗೂ ಮಾಜಿ ಸೈನಿಕ ಉದ್ದಿಮೆದಾರರಿಗೆ ಕನಿಷ್ಠ ಶೇ. 10ರಷ್ಟು ನಿವೇಶನ/ಶೆಡ್‌ಗಳನ್ನು ಮೀಸಲಿಡತಕ್ಕದ್ದು ಹಾಗೂ ಈ ವರ್ಗದ ಉದ್ದಿಮೆದಾರರು ನಿವೇಶನ/ಶೆಡ್‌ಗಳ ಮೊತ್ತವನ್ನು 6 ಸಮ ತ್ರೈಮಾಸಿಕ ಕಂತುಗಳಲ್ಲಿ ಪಾವತಿಸಲು ಅವಕಾಶ ಕಲ್ಪಿಸತಕ್ಕದ್ದು.

ಈ ಹಿಂದೆ ವಿವಿಧ ವರ್ಗಗಳ ಸಮುದಾಯದ ಉದ್ದಿಮೆದಾರರಿಗೆ ಮೀಸಲಾತಿ ನಿರ್ಧರಿಸುವ ಕುರಿತು ಹೊರಡಿಸಲಾದ ಸರ್ಕಾರಿ ಆದೇಶ ಸಂ: ಸಿಐ 148 ಸಿಎಸ್‌ಸಿ 2015, ದಿ: 27.06.2015ಅನ್ನು ಹಿಂಪಡೆಯಲಾಗಿದೆ. ಕೆ.ಎಸ್.ಎಸ್.ಐ.ಡಿ.ಸಿ. ಮತ್ತು ಕೆ.ಐ.ಎ.ಡಿ.ಬಿ. ಸಂಸ್ಥೆಗಳು ಈ ಮೀಸಲಾತಿ ಆದೇಶವನ್ನು ತತ್‌ಕ್ಷಣದಿಂದ ಜಾರಿಗೊಳಿಸತಕ್ಕದ್ದು.

**P.R. 364**
**SC – 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಲ್.ಎಸ್.ಶ್ರೀಕಂಠಬಾಬು**
ಸರ್ಕಾರದ ಅಧೀನ ಕಾರ್ಯದರ್ಶಿ (ಸಪ್ರಕೈ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ವಸತಿ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ : ವಇ 73 ಕೊಮಂಸೇ 2014, ಬೆಂಗಳೂರು, ದಿನಾಂಕ : 22–04–2016**

ಸರ್ಕಾರದ ಅಧಿಸೂಚನೆ ಸಂಖ್ಯೆ: ವಇ 73 ಕೊಮಂಸೇ 2014, ದಿನಾಂಕ: 24.11.2014ರ ಅಧಿಸೂಚನೆಯ 4ನೇ ಸಾಲಿನಲ್ಲಿ ನಮೂದಾಗಿರುವ ದಿನಾಂಕ: 23.04.2016ರ ಬದಲಿಗೆ **ದಿನಾಂಕ: 23.05.2016** ಎಂದು ತಿದ್ದಿ ಓದಿಕೊಳ್ಳುವುದು.

ಉಳಿದಂತೆ, ಸದರಿ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

**P.R. 365**
**SC – 50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಮೀರ್ ಮಡಿಮನ್**
ಸರ್ಕಾರದ ಅಧೀನ ಕಾರ್ಯದರ್ಶಿ – 2
ವಸತಿ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಜಿ.ವೆಂಕಟರಮಣಯ್ಯ, ನಿವೃತ್ತ ಅಬಕಾರಿ ಅಧೀಕ್ಷಕರು, ಇವರ ಅಮಾನತ್ತಿನ ಅವಧಿಯನ್ನು ಕ್ರಮ ಬದ್ಧಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಆಇ 91 ಇಪಿಎಸ್ 2008 (1), ದಿನಾಂಕ: 20–05–2008.

2. ಸರ್ಕಾರದ ಆದೇಶ ಸಂಖ್ಯೆ: ಆಇ 91 ಇಪಿಎಸ್ 2008, ದಿನಾಂಕ: 26–12–2008.

3. ಸರ್ಕಾರದ ಆದೇಶ ಸಂಖ್ಯೆ: ಆಇ 91 ಇಪಿಎಸ್ 2008, ದಿನಾಂಕ: 08–11–2013

4. ಶ್ರೀ ಜಿ.ವೆಂಕಟರಮಣಯ್ಯ, ಅಂದಿನ ಅಬಕಾರಿ ಅಧೀಕ್ಷಕರು, ಇವರ ಮನವಿ ದಿನಾಂಕ: 10–09–2015.

**ಪ್ರಸ್ತಾವನೆ :**

ಬೆಂಗಳೂರು ನಗರ ಜಿಲ್ಲೆಯ ಡಿ.ಜಿ.ಹಳ್ಳಿ, ಬೆಂಗಳೂರು ಗ್ರಾಮಾಂತರ ಹಾಗೂ ಕೋಲಾರ ಜಿಲ್ಲೆಗಳಲ್ಲಿ ದಿನಾಂಕ: 17/18–05–2008ರಂದು ಜರುಗಿದ ವಿಷಪೂರಿತ ಮದ್ಯ ಸೇವನೆಯ ದುರಂತದಿಂದಾಗಿ ಪ್ರಕರಣಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮಾಂಕ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಜಿ.ವೆಂಕಟರಮಣಯ್ಯ, ಅಂದಿನ ಅಬಕಾರಿ ಅಧೀಕ್ಷಕರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಲಾಗಿತ್ತು. ನಂತರ, ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಶ್ರೀ ಜಿ.ವೆಂಕಟರಮಣಯ್ಯನವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ನೇಮಿಸಲಾಗಿದೆ. ನಂತರದಲ್ಲಿ, ವಿಚಾರಣಾ ವರದಿಯಲ್ಲಿ ಇವರ ಮೇಲಿನ ಆರೋಪಗಳು ಸಾಬೀತಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ ಶ್ರೀ ಜಿ.ವೆಂಕಟರಮಣಯ್ಯ, ಅಬಕಾರಿ ಅಧೀಕ್ಷಕರು, ಇವರಿಗೆ ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ನಿಯಮ 8(iv-a) ರನ್ವಯ ಅವರು ಪಡೆಯುತ್ತಿದ್ದ ವೇತನವನ್ನು 3 ಹಂತ ಕೆಳಕ್ಕೆ ಒಂದು ವರ್ಷದ ಅವಧಿಗೆ ಇಳಿಸಿ ದಂಡನೆ ವಿಧಿಸಲಾಗಿದೆ. ಅಲ್ಲದೇ, ಈ ದಂಡನೆಯು ಅವರ ಮುಂಬರುವ ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಪರಿಣಾಮ ಬೀರುವುದಿಲ್ಲವೆಂದು ಸಹ ಆದೇಶಿಸಲಾಗಿದೆ. ಶ್ರೀ ಜಿ.ವೆಂಕಟರಮಣಯ್ಯ, ಅಬಕಾರಿ ಅಧೀಕ್ಷಕರು ದಿನಾಂಕ: 28–02–2015ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುತ್ತಾರೆ. ನಂತರ, ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಶ್ರೀಯುತರು, ಅಮಾನತ್ತು ಅವಧಿಯನ್ನು ಅವರ ಹಕ್ಕಿನಲ್ಲಿರುವ ಪರಿವರ್ತಿತ ರಜೆಯೆಂದು ಪರಿಗಣಿಸುವಂತೆ ಮನವಿ ಸಲ್ಲಿಸಿರುವುದರಿಂದ ಮನವಿಯನ್ನು ಪರಿಶೀಲಿಸಿದ ಸರ್ಕಾರವು, ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 108 ಇಪಿಎಸ್ 2015, ಬೆಂಗಳೂರು, ದಿನಾಂಕ: 02.05.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು, ಶ್ರೀ ಜಿ.ವೆಂಕಟರಮಣಯ್ಯ, ಅಂದಿನ ಅಬಕಾರಿ ಅಧೀಕ್ಷಕರು ಇವರು ದಿನಾಂಕ: 20–05–2008ರಿಂದ ದಿನಾಂಕ: 27–12–2008ರ ನಡುವೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 100(7)ರನ್ವಯ ಅವರ ಹಕ್ಕಿನಲ್ಲಿರುವ ಪರಿವರ್ತಿತೆ ರಜೆ ಎಂದು ಪರಿಗಣಿಸಿ ಆದೇಶಿಸಿದೆ.

**P.R. 366**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವೆಂಕಟೇಶ್.ಜಿ.**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಅಬಕಾರಿ)

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇವರ ಸೇವೆಯನ್ನು ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಗೆ ವಿಲೀನಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1) ಮಾನ್ಯ ಸಚಿವರು, ಸಮಾಜ ಕಲ್ಯಾಣ ಇಲಾಖೆ ಇವರ ಟಿಪ್ಪಣಿ ದಿನಾಂಕ: 31–08–2015.

2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಸಕನಿ/ಸಿಬ್ಬಂದಿ–1/ಸಿಆರ್–24/2015–16, ದಿನಾಂಕ: 14–10–2015.

3) ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರೌಢಶಿಕ್ಷಣ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 153 ಡಿಜಿಡಿ 2015, ದಿನಾಂಕ: 16–10–2015.

4) ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇವರು ದಿನಾಂಕ: 27–04–2016ರಂದು ಸಲ್ಲಿಸಿರುವ ಮುಚ್ಚಳಿಕೆ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಗೆ ಪಡೆದು ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆಯ ಹುದ್ದೆಗೆ ಖಾಯಂ ಆಗಿ ವಿಲೀನಗೊಳಿಸಲು ಅಗತ್ಯ ಕ್ರಮ ವಹಿಸುವಂತೆ ಸೂಚಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ದಿನಾಂಕ: 10–10–2015ರ ಪತ್ರದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಸರ್ಕಾರದ ಸುತ್ತೋಲೆ ದಿನಾಂಕ: 08–11–2011ರಲ್ಲಿ ಪ್ರಾಥಮಿಕ, ಪ್ರೌಢಶಿಕ್ಷಣ ಮತ್ತು ಮುಖ್ಯ ಶಿಕ್ಷಕರುಗಳನ್ನು ಹಾಗೂ ಪದವಿಪೂರ್ವ ಕಾಲೇಜುಗಳ ಉಪನ್ಯಾಸಕರುಗಳನ್ನು ಮತ್ತು ಪ್ರಾಂಶುಪಾಲರುಗಳನ್ನು ಬೋಧಕೇತರ ಕಾರ್ಯಗಳಿಗೆ ನಿಯೋಜಿಸಿದ್ದಲ್ಲಿ ನ್ಯಾಯಾಲಯದ ನಿಂದನೆಗೆ ಗುರಿಯಾಗಬೇಕಾಗಿರುವುದರಿಂದ, ಯಾವುದೇ ಕಾರಣಕ್ಕೂ ಸದರಿಯವರ ನಿಯೋಜನೆ ಮಾಡುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ ಎಂದು

ತಿಳಿಸಲಾಗಿದೆ. ಇಲಾಖೆಯಲ್ಲಿನ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಹುದ್ದೆಯ ನೇರ ನೇಮಕಾತಿ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದಿಂದ ಗೆಜೆಟೆಡ್ ಪ್ರೊಬೇಷನರ್ಸ್ ಪರೀಕ್ಷೆಯ ಮೂಲಕವೇ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಈಗಾಗಲೇ ಆಯೋಗಕ್ಕೆ ಮಾಹಿತಿಯನ್ನು ಸಲ್ಲಿಸಲಾಗಿರುವುದರಿಂದ ಯಾವುದೇ ನೇರ ನೇಮಕಾತಿ ಹುದ್ದೆಯು ಖಾಲಿ ಇರುವುದಿಲ್ಲ. ಹಾಗೆಯೇ, ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗದಿಂದ ಕ್ರಮ ವಹಿಸಬೇಕಾಗಿರುವುದರಿಂದ ಯಾವುದೇ ವಿಲೀನ ಪ್ರಕ್ರಿಯೆಯನ್ನು ಮಾಡುವಾಗ ಕೇವಲ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದ ಅಭಿಪ್ರಾಯ ಪಡೆಯದೇ ಕರ್ನಾಟಕ ಲೋಕಸೇವಾ ಆಯೋಗರವರಿಂದಲೂ ಸಹಮತಿ ಪಡೆಯುವುದು ಅತ್ಯವಶ್ಯಕವಾಗಿರುತ್ತದೆ. ಇಲಾಖೆಯಲ್ಲಿ ಯಾವುದೇ ನೇರ ನೇಮಕಾತಿ ಹುದ್ದೆಗಳು ಖಾಲಿ ಇರದ ಕಾರಣ, ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ರವರನ್ನು ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಹುದ್ದೆಗೆ ವಿಲೀನಗೊಳಿಸಬಾರದೆಂಬ ವಿಷಯವನ್ನು ಅವಗಾಹನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ದಿನಾಂಕ: 16–10–2015ರ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇವರನ್ನು ಸಮಾಜ ಕಲ್ಯಾಣ ಇಲಾಖೆಯ ತತ್ಸಮಾನ ಹುದ್ದೆಯಲ್ಲಿ ವಿಲೀನಗೊಳಿಸಲು ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲು ಸಹಮತಿ ನೀಡಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ದಿನಾಂಕ: 27–04–2014ರ ಮುಚ್ಚಳಿಕೆಯಲ್ಲಿ ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇವರು ತಾವು ಮೂಲತ: ಶಿಕ್ಷಣ ಇಲಾಖೆಯವರಾಗಿದ್ದು, ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದು, ಸಮಾಜ ಕಲ್ಯಾಣ ಇಲಾಖೆಯಲ್ಲಿ ಸೇವಾ ವಿಲೀನಗೊಳ್ಳಲು ಇಚ್ಛಿಸಿದ್ದು, ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ಸಮಾಜ ಕಲ್ಯಾಣ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರು, ಗ್ರೇಡ್ – 2 ರ ವೃಂದದ ಜೇಷ್ಠತೆಯಲ್ಲಿ ಕೊನೆಯವರಾಗಿರಲು ಒಪ್ಪಿರುವುದಾಗಿ ತಿಳಿಸಿರುತ್ತಾರೆ.

ಸಮಾಜ ಕಲ್ಯಾಣ ಇಲಾಖೆಯಲ್ಲಿ ಹಲವಾರು ಹೊಸ ಯೋಜನೆಗಳು ರೂಪಿತವಾಗಿದ್ದು, ಹಲವಾರು ಹುದ್ದೆಗಳು ಸಕ್ರಮವಾಗಿ ಭರ್ತಿಯಾಗದೆ ಖಾಲಿ ಇರುವುದರಿಂದ, ಸಹಾಯಕ ನಿರ್ದೇಶಕರು ಗ್ರೇಡ್ – 1 ಹುದ್ದೆಗಳ ಅವಶ್ಯಕತೆ ಹೆಚ್ಚಾಗಿದ್ದು, ಇಲಾಖೆಯ ಯೋಜನೆಗಳ ಅನುಷ್ಠಾನಕ್ಕೆ ತೊಂದರೆಯಾಗಿರುವುದರಿಂದ, ಖಾಯಂ ಅಧಿಕಾರಿಗಳ ಅವಶ್ಯಕತೆ ಇರುವುದನ್ನು ಮನಗಂಡು ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇವರನ್ನು ಸಮಾಜ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಯಲ್ಲಿ ವಿಲೀನಗೊಳಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 339 ಪಕಸೇ 2015, ಬೆಂಗಳೂರು, ದಿನಾಂಕ: 28.04.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಡಿ.ಚನ್ನಬಸಪ್ಪ, ಭೌತಶಾಸ್ತ್ರ ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕೆ.ಆರ್.ಪುರಂ, ಬೆಂಗಳೂರು ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು, 1977 ನಿಯಮ 16(ಎ)(ii) ಮೇರೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ನೇರ ನೇಮಕಾತಿ ಹುದ್ದೆಯ ಎದುರಾಗಿ ಖಾಯಂ ವರ್ಗಾವಣೆ ಮೂಲಕ ನೇಮಿಸಿ ಆದೇಶಿಸಿದೆ.

ಮುಂದುವರೆದು, ಸಹಾಯಕ ನಿರ್ದೇಶಕರು ಗ್ರೇಡ್ – 1 (ಸ್ವಂತ ವೇತನ ಶ್ರೇಣಿಯಲ್ಲಿ) ಸಮಾಜ ಕಲ್ಯಾಣ ಇಲಾಖೆ, ಬಂಗಾರಪೇಟೆ ತಾಲ್ಲೂಕು ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

**ಈ ಸಂಬಂಧದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಈ ಕೆಳಗೆ ವಿಧಿಸಿರುವ ಷರತ್ತುಗಳನ್ನು ಸದರಿ ಅಧಿಕಾರಿಯಿಂದ ಖಾತ್ರಿ ಪಡಿಸಿಕೊಳ್ಳತಕ್ಕದ್ದು.**

1) ಸಂಬಂಧಪಟ್ಟ ನೌಕರರು ಸಕ್ರಮವಾಗಿ ನೇಮಕ ಮಾಡಿಕೊಂಡಿರಬೇಕು ಹಾಗೂ ಅವರು ತಮ್ಮ ಮಾತ್ರ ಇಲಾಖೆಯಲ್ಲಿ ಪರಿವೀಕ್ಷಣಾವಧಿ/ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು.
2) ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಗೆ ನಿಗಧಿಪಡಿಸಿರಬಹುದಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು. ಒಂದು ವೇಳೆ ನಿರ್ಧಿಷ್ಟಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದಿದ್ದಲ್ಲಿ ಮುಂದಿನ 2 ವರ್ಷಗಳ ಒಳಗೆ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು.
3) ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಕೋರಿಕೆಯ ಮೇರೆಗೆ ಮಾಡಲು ಉದ್ದೇಶಿಸಿರುವುದರಿಂದ ವರ್ಗಾವಣೆ ಮೂಲಕ ನೇಮಿಸಲಾಗುವ ಹುದ್ದೆಯಲ್ಲಿ ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ನಿರ್ಧರಿಸಬೇಕು.
4) ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆಯ ಮೂಲಕ ಪಡೆಯಬೇಕು.
5) ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾ ಅವಧಿಯಲ್ಲಿ ಒಮ್ಮೆ ಮಾತ್ರ ಮಾಡಿರಬೇಕು.
6) ನೌಕರರು ವರ್ಗಾವಣೆ ಭತ್ಯೆ ಮತ್ತು ಸೇರುವಿಕೆ ಕಾಲ ಪಡೆಯಲು ಅರ್ಹರಿರುವುದಿಲ್ಲ.

ಮೇಲ್ಕಂಡ ಎಲ್ಲಾ ಷರತ್ತುಗಳನ್ನು ಪೂರೈಸುವ ಮುಚ್ಚಳಿಕೆಯ ಪ್ರಮಾಣ ಪತ್ರವನ್ನು ಬಾಂಡ್ ಪೇಪರ್ ಮೂಲಕ ಪಡೆಯತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು)ಯ ಟಿಪ್ಪಣಿ ಸಂಖ್ಯೆ: ಸಿಆಸುಇ 138 ಸೇನಿಎ 2015, ದಿನಾಂಕ: 19–06–2015ರಂದು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 367**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗಿರಿಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ – 1,

ಸಮಾಜ ಕಲ್ಯಾಣ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಚಿತ್ರದುರ್ಗ ಇವರ ಸೇವೆಯನ್ನು ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಗೆ ವಿಲೀನಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಶಿಕ್ಷಣ ಇಲಾಖೆಯ ಕಡತ ಸಂಖ್ಯೆ: ಇಡಿ 713 ಎಸ್‌ಇಎಸ್ 2013, ದಿನಾಂಕ: 06–01–2014.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಸಕನಿ/ಸಿಬ್ಬಂದಿ–1/ಸಿಆರ್–8/2014–15, ದಿನಾಂಕ: 29–04–2014.
3. ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರೌಢಶಿಕ್ಷಣ) ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 713 ಎಸ್‌ಇಎಸ್ 2013, ದಿನಾಂಕ: 30–01–2016.
4. ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಹೊಳಲ್ಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 16–04–2016ರಂದು ಸಲ್ಲಿಸಿರುವ ಮುಚ್ಚಳಿಕೆ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಶಿಕ್ಷಣ ಇಲಾಖೆಯ ಕಡತದಲ್ಲಿ ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಚಿತ್ರದುರ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಲು ಅನುಕೂಲವಾಗುವಂತೆ ಸದರಿಯವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ ಶಿಕ್ಷಣ ಇಲಾಖೆಯು ಸಮಾಜ ಕಲ್ಯಾಣ ಇಲಾಖೆಯ ಅಭಿಪ್ರಾಯ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ದಿನಾಂಕ: 29–04–2014ರ ಪತ್ರದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಸರ್ಕಾರದ ಸುತ್ತೋಲೆ ದಿನಾಂಕ: 08–11–2011ರಲ್ಲಿ ಪ್ರಾಥಮಿಕ, ಪ್ರೌಢಶಾಲಾ ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರುಗಳನ್ನು ಹಾಗೂ ಪದವಿಪೂರ್ವ ಕಾಲೇಜುಗಳ ಉಪನ್ಯಾಸಕರುಗಳನ್ನು ಮತ್ತು ಪ್ರಾಂಶುಪಾಲರುಗಳನ್ನು ಬೋಧಕೇತರ ಕಾರ್ಯಗಳಿಗೆ ನಿಯೋಜಿಸಿದ್ದಲ್ಲಿ ನ್ಯಾಯಾಲಯದ ನಿಂದನೆಗೆ ಗುರಿಯಾಗಬೇಕಾಗಿರುವುದರಿಂದ, ಯಾವುದೇ ಕಾರಣಕ್ಕೂ ಸದರಿಯವರ ನಿಯೋಜನೆ ಮಾಡುವುದನ್ನು ಕಡ್ಡಾಯವಾಗಿ ನಿಷೇದಿಸಲಾಗಿದೆ ಎಂದು ತಿಳಿಸಲಾಗಿದೆ. ಇಲಾಖೆಯಲ್ಲಿನ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಹುದ್ದೆಯ ನೇರ ನೇಮಕಾತಿ ಹುದ್ದೆಗಳನ್ನು ಕರ್ನಾಟಕ ಲೋಕಸೇವಾ ಆಯೋಗದಿಂದ ಗೆಜೆಟೆಡ್ ಪ್ರೊಬೇಷನರ್ಸ್ ಪರೀಕ್ಷೆಯ ಮೂಲಕವೇ ಭರ್ತಿ ಮಾಡಬೇಕಾಗಿದ್ದು, ಈ ಬಗ್ಗೆ ಈಗಾಗಲೇ ಆಯೋಗಕ್ಕೆ ಮಾಹಿತಿಯನ್ನು ಸಲ್ಲಿಸಲಾಗಿರುವುದರಿಂದ ಯಾವುದೇ ನೇರ ನೇಮಕಾತಿ ಹುದ್ದೆಯು ಖಾಲಿ ಇರುವುದಿಲ್ಲ. ಹಾಗೆಯೇ, ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗದಿಂದ ಕ್ರಮ ವಹಿಸಬೇಕಾಗಿರುವುದರಿಂದ ಯಾವುದೇ ವಿಲೀನ ಪ್ರಕ್ರಿಯೆಯನ್ನು ಮಾಡುವಾಗ ಕೇವಲ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದ ಅಭಿಪ್ರಾಯ ಪಡೆಯದೇ ಕರ್ನಾಟಕ ಲೋಕಸೇವಾ ಆಯೋಗದವರಿಂದಲೂ ಸಹಮತಿ ಪಡೆಯುವುದು ಅತ್ಯವಶ್ಯಕವಾಗಿರುತ್ತದೆ. ಇಲಾಖೆಯಲ್ಲಿ ಯಾವುದೇ ನೇರ ನೇಮಕಾತಿ ಹುದ್ದೆಗಳು ಖಾಲಿ ಇರದ ಕಾರಣ, ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು ರವರನ್ನು ಸಮಾಜ ಕಲ್ಯಾಣ ಇಲಾಖೆಯ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಹುದ್ದೆಗೆ ವಿಲೀನಗೊಳಿಸಬಾರದೆಂಬ ವಿಷಯವನ್ನು ಅವಗಾಹನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ದಿನಾಂಕ: 30–01–2016ರ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಚಿತ್ರದುರ್ಗ ಜಿಲ್ಲೆ ಇವರ ಪ್ರಕರಣವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ಸಮಾಜ ಕಲ್ಯಾಣ ಇಲಾಖೆಯ ತತ್ಸಮಾನ ಹುದ್ದೆಯಲ್ಲಿ ವಿಲೀನಗೊಳಿಸಲು ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲು ಸಹಮತಿ ನೀಡಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ದಿನಾಂಕ: 16–04–2016ರ ಮುಚ್ಚಳಿಕೆಯಲ್ಲಿ ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಚಿತ್ರದುರ್ಗ ಜಿಲ್ಲೆ ಇವರು ತಾವು ಮೂಲತ: ಶಿಕ್ಷಣ ಇಲಾಖೆಯವರಾಗಿದ್ದು, ಮುಖ್ಯ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದು, ಸಮಾಜ ಕಲ್ಯಾಣ ಇಲಾಖೆಯಲ್ಲಿ ಸೇವಾ ವಿಲೀನಗೊಳ್ಳಲು ಇಚ್ಛಿಸಿದ್ದು, ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ಸಮಾಜ ಕಲ್ಯಾಣ ಇಲಾಖೆಯಲ್ಲಿ ಸಹಾಯಕ ನಿರ್ದೇಶಕರು, ಗ್ರೇಡ್ – 2 ರ ವೃಂದದ ಜೇಷ್ಠತೆಯಲ್ಲಿ ಕೊನೆಯವರಾಗಿರಲು ಒಪ್ಪಿರುವುದಾಗಿ ತಿಳಿಸಿರುತ್ತಾರೆ.

ಸಮಾಜ ಕಲ್ಯಾಣ ಇಲಾಖೆಯಲ್ಲಿ ಹಲವಾರು ಹೊಸ ಯೋಜನೆಗಳು ರೂಪಿತವಾಗಿದ್ದು, ಹಲವಾರು ಹುದ್ದೆಗಳು ಸಕ್ರಮವಾಗಿ ಭರ್ತಿಯಾಗದೆ ಖಾಲಿ ಇರುವುದರಿಂದ, ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಗಳ ಅವಶ್ಯಕತೆ ಹೆಚ್ಚಾಗಿದ್ದು, ಇಲಾಖೆಯ ಯೋಜನೆಗಳ ಅನುಷ್ಠಾನಕ್ಕೆ ತೊಂದರೆಯಾಗಿರುವುದರಿಂದ, ಖಾಯಂ ಅಧಿಕಾರಿಗಳ ಅವಶ್ಯಕತೆ ಇರುವುದನ್ನು ಮನಗಂಡು ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಚಿತ್ರದುರ್ಗ ಜಿಲ್ಲೆ ಇವರನ್ನು ಸಮಾಜ ಕಲ್ಯಾಣ ಇಲಾಖೆಯ ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಯಲ್ಲಿ ವಿಲೀನಗೊಳಿಸಲು ಸರ್ಕಾರವು ನಿರ್ಧರಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 123 ಪಕಸೇ 2014, ಬೆಂಗಳೂರು, ದಿನಾಂಕ: 28.04.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಓ.ಪರಮೇಶ್ವರಪ್ಪ, ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಿಕ್ಕಂದವಾಡಿ, ಚಿತ್ರದುರ್ಗ ಜಿಲ್ಲೆ ಇವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರು ಗ್ರೇಡ್ – 2 ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು, 1977 ನಿಯಮ 16(ಎ)(ii) ಮೇರೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ನೇರ ನೇಮಕಾತಿ ಹುದ್ದೆಯ ಎದುರಾಗಿ ಖಾಯಂ ವರ್ಗಾವಣೆ ಮೂಲಕ ನೇಮಿಸಿ ಆದೇಶಿಸಿದೆ.

ಮುಂದುವರೆದು, ಶ್ರೀ ಓ.ಪರಮೇಶ್ವರಪ್ಪ ಇವರನ್ನು ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ, ಚಿತ್ರದುರ್ಗ ಇಲ್ಲಿ ಖಾಲಿ ಇರುವ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

**ಈ ಸಂಬಂಧದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಈ ಕೆಳಗೆ ವಿಧಿಸಿರುವ ಷರತ್ತುಗಳನ್ನು ಸದರಿ ಅಧಿಕಾರಿಯಿಂದ ಖಾತ್ರಿ ಪಡಿಸಿಕೊಳ್ಳತಕ್ಕದ್ದು.**

1) ಸಂಬಂಧಪಟ್ಟ ನೌಕರರು ಸಕ್ರಮವಾಗಿ ನೇಮಕ ಮಾಡಿಕೊಂಡಿರಬೇಕು ಹಾಗೂ ಅವರು ತಮ್ಮ ಮಾತೃ ಇಲಾಖೆಯಲ್ಲಿ ಪರಿವೀಕ್ಷಣಾವಧಿ/ ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರಬೇಕು.

2) ಸಂಬಂಧಪಟ್ಟ ನೌಕರರು ವರ್ಗಾವಣೆ ಮೂಲಕ ನೇಮಿಸಲು ಉದ್ದೇಶಿಸಿರುವ ಹುದ್ದೆಗೆ ನಿಗಧಿಪಡಿಸಿರಬಹುದಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರಬೇಕು. ಒಂದು ವೇಳೆ ನಿರ್ಧಿಷ್ಟಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗದಿದ್ದಲ್ಲಿ ಮುಂದಿನ 2 ವರ್ಷಗಳ ಒಳಗೆ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು.

3) ಪ್ರಸ್ತಾಪಿತ ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಕೋರಿಕೆಯ ಮೇರೆಗೆ ಮಾಡಲು ಉದ್ದೇಶಿಸಿರುವುದರಿಂದ ವರ್ಗಾವಣೆ ಮೂಲಕ ನೇಮಿಸಲಾಗುವ ಹುದ್ದೆಯಲ್ಲಿ ಈ ನೌಕರರ ಜೇಷ್ಠತೆಯನ್ನು ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957ರ ನಿಯಮ 6ರ ಮೊದಲನೇ ಪರಂತುಕದನುಸಾರ ನಿರ್ಧರಿಸಬೇಕು.

4) ಈ ಬಗ್ಗೆ ನೌಕರರ ಒಪ್ಪಿಗೆಯನ್ನು ಬರವಣಿಗೆಯ ಮೂಲಕ ಪಡೆಯಬೇಕು.

5) ವರ್ಗಾವಣೆ ಮೂಲಕ ನೇಮಕಾತಿಯನ್ನು ನೌಕರರ ಸೇವಾ ಅವಧಿಯಲ್ಲಿ ಒಮ್ಮೆ ಮಾತ್ರ ಮಾಡಿರಬೇಕು.

6) ನೌಕರರು ವರ್ಗಾವಣೆ ಭತ್ಯೆ ಮತ್ತು ಸೇರಿವಿಕೆ ಕಾಲ ಪಡೆಯಲು ಅರ್ಹರಿರುವುದಿಲ್ಲ.

ಮೇಲ್ಕಂಡ ಎಲ್ಲಾ ಷರತ್ತುಗಳನ್ನು ಪೂರೈಸುವ ಮುಚ್ಚಳಿಕೆಯ ಪ್ರಮಾಣ ಪತ್ರವನ್ನು ಬಾಂಡ್ ಪೇಪರ್ ಮೂಲಕ ಪಡೆಯತಕ್ಕದ್ದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು)ಯ ಟಿಪ್ಪಣಿ ಸಂಖ್ಯೆ: ಸಿಆಸುಇ 138 ಸೇನಿಎ 2015, ದಿನಾಂಕ: 19-06-2015ರಂದು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

**P.R. 368**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗಿರಿಜಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ - 1,

ಸಮಾಜ ಕಲ್ಯಾಣ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕು ಮೂಡನಿಡಂಬೂರು ಗ್ರಾಮದಲ್ಲಿನ 2.50 ಎಕರೆ ಸರ್ಕಾರಿ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ರವರಿಗೆ ಬಸ್ ನಿಲ್ದಾಣ ನಿರ್ಮಿಸಲು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ಲೋಕೋಪಯೋಗಿ ಅ.ಟಿ. ಸಂಖ್ಯೆ: ಲೋಇ 53 ಬಿಎಂಎಸ್ 2014, ದಿನಾಂಕ: 08-10-2015.
2. ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆರವರ ಪತ್ರ ಸಂಖ್ಯೆ: ಎಲ್ಎನ್ಡಿ/ಪಿಡಿಆರ್.ಸಿಆರ್.8/2008-09/22871 ದಿನಾಂಕ: 03-11-2015.
3. ವ್ಯವಸ್ಥಾಪಕರು, ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ರವರ ಪತ್ರ ಸಂಖ್ಯೆ: ಕರಾಸಾ:ಕೇಕ/ಕಾಇ/ಎಸ್ಟೇಟ್/1775/2015-16, ದಿನಾಂಕ: 11-03-2016.

**ಪ್ರಸ್ತಾವನೆ :**

ಮೇಲೆ (1)ರ ಅನಧಿಕೃತ ಟಿಪ್ಪಣಿಯಲ್ಲಿ ಲೋಕೋಪಯೋಗಿ ಇಲಾಖೆಯ ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರುರವರ ಪತ್ರ ದಿನಾಂಕ: 10-08-2015ರ ಪತ್ರದಲ್ಲಿ ಕೋರಿರುವಂತೆ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಮೂಡನಿಡಂಬೂರು ಗ್ರಾಮದಲ್ಲಿನ ಸರ್ವೆ ನಂ. 58/ಎ1 ರಲ್ಲಿ 2.77 ಎಕರೆ (277 ಸೆಂಟ್ಸ್) ಜಮೀನು ಲೋಕೋಪಯೋಗಿ ಇಲಾಖೆಯ ವಶದಲ್ಲಿದ್ದು ಅದನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗೆ ಬಸ್ ನಿಲ್ದಾಣ ನಿರ್ಮಿಸಲು ಹಸ್ತಾಂತರಿಸುವ ಬಗ್ಗೆ ಅಭಿಪ್ರಾಯ ನೀಡುವಂತೆ ಲೋಕೋಪಯೋಗಿ ಇಲಾಖೆಯ ಕಂದಾಯ ಇಲಾಖೆಯನ್ನು ಕೋರಿದೆ.

ಮುಂದುವರಿದು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರುರವರ ಪತ್ರದಲ್ಲಿ ಉಡುಪಿ ತಾಲ್ಲೂಕು, ಕಡೇಕಾರ್ ಗ್ರಾಮದ ಸರ್ವೆ ನಂ. 76/1, 76/2 ಮತ್ತು 76/3 ರಲ್ಲಿ (ಕಿನ್ನಿಮೂಲ್ಕಿಯ ಫೈರ್ ಸ್ಟೇಷನ್ ಹತ್ತಿರ) ಕೆ.ಎಸ್.ಆರ್.ಟಿ.ಸಿ. ರವರ ವಶದಲ್ಲಿರುವ ಒಟ್ಟು 1.12 ಎಕರೆ (112 ಸೆಂಟ್ಸ್) ಜಮೀನನ್ನು ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸುವ ಷರತ್ತಿಗೆ ಒಳಪಟ್ಟು ಮೇಲೆ ತಿಳಿಸಿದ ಲೋಕೋಪಯೋಗಿ ಇಲಾಖೆಯ ವಶದಲ್ಲಿರುವ 2.77 ಎಕರೆ ಜಮೀನನ್ನು ಬಸ್ ನಿಲ್ದಾಣ ನಿರ್ಮಿಸಲು ಕೆ.ಎಸ್.ಆರ್.ಟಿ.ಸಿ.ಗೆ ಹಸ್ತಾಂತರಿಸಬಹುದೆಂದೂ ಹಾಗೂ ಲೋಕೋಪಯೋಗಿ ಇಲಾಖೆಯು ನೀಡಲು ಉದ್ದೇಶಿಸಿರುವ ಜಮೀನಿನ ಬೆಲೆ ಕೆ.ಎಸ್.ಆರ್.ಟಿ.ಸಿ. ರವರ ಜಮೀನಿನ ಬೆಲೆಗೆ ಹೋಲಿಸಿದಲ್ಲಿ ಹೆಚ್ಚಾಗಿರುವ ಕಾರಣ ಅದರ ವ್ಯತ್ಯಾಸದ ಮೊತ್ತವನ್ನು ಕೆ.ಎಸ್.ಆರ್.ಟಿ.ಸಿ. ಪಾವತಿಸಬೇಕು ಅಥವಾ ಉಡುಪಿ ನಗರ/ಹೊರವಲಯದಲ್ಲಿ ಸದರಿ ವ್ಯತ್ಯಾಸದ ಮೊತ್ತಕ್ಕೆ ಸಮನಾದ ಜಮೀನನ್ನು ನೀಡಬೇಕೆಂದು ತಿಳಿಸಿದ್ದಾರೆ. ಲೋಕೋಪಯೋಗಿ ಇಲಾಖೆಯ ಸದರಿ ಜಮೀನಿನ ಒಟ್ಟು ಮೊತ್ತ ರೂ. 16,22,47,749-00 ಆಗಿದ್ದು, ಕೆ.ಎಸ್.ಆರ್.ಟಿ.ಸಿ.ರವರ ಜಮೀನಿನ ಮೊತ್ತ ರೂ. 4,88,32,000-00 ಎಂದು ತಿಳಿಸಲಾಗಿದೆ. ಆದುದರಿಂದ ಸದರಿ ವ್ಯತ್ಯಾಸದ ಮೊತ್ತ ರೂ. 11,34,15,749-00 ಅನ್ನು ಕೆ.ಎಸ್.ಆರ್.ಟಿ.ಸಿ.ಯು ಲೋಕೋಪಯೋಗಿ ಇಲಾಖೆಗೆ ಪಾವತಿಸಬೇಕೆಂದು ಹಾಗೂ ಬಂದ ಹಣದಿಂದ ನೌಕರರ ವಸತಿಗೃಹಗಳ ನಿರ್ಮಿಸುವ ಸಲುವಾಗಿ ಉಪಯೋಗಿಸಲು ಲೋಕೋಪಯೋಗಿ ಇಲಾಖೆ ಉದ್ದೇಶಿಸಿದೆ ಎಂದು ತಿಳಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿರವರು ಉಡುಪಿ ನಗರವು ಒಂದು ಪುಣ್ಯ ಕ್ಷೇತ್ರವಾಗಿದ್ದು, ಮಲ್ಪೆ ಮೀನುಗಾರಿಕಾ ಬಂದರು, ಮಲ್ಪೆ ಬೀಚು, ಸೆಂಟ್ ಮೇರೀಸ್ ದ್ವೀಪ, ಮಣಿಪಾಲದ ಸಮೂಹ ಆಸ್ಪತ್ರೆ ಮತ್ತು ವಿಶ್ವವಿದ್ಯಾಲಯ ಬ್ಯಾಂಕುಗಳು ಅನೇಕ ಕೈಗಾರಿಕಾ ಮತ್ತು ಪ್ರವಾಸಿ ವಾಣಿಜ್ಯ ಕೇಂದ್ರಗಳನ್ನು ಹೊಂದಿರುವ ನಗರವಾಗಿದ್ದು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ಸುಸಜ್ಜಿತ ಬಸ್ಸು ನಿಲ್ದಾಣವಿರುವುದಿಲ್ಲ. ಸಾರ್ವಜನಿಕರಿಂದ ಸುಸಜ್ಜಿತ ಬಸ್ಸು ನಿಲ್ದಾಣ ನಿರ್ಮಿಸುವಂತೆ ಕೋರಿಕೆ ಇರುವುದರಿಂದ ಲೋಕೋಪಯೋಗಿ ವಶದಲ್ಲಿರುವ ಉಡುಪಿ ತಾಲ್ಲೂಕು, ಮೂಡನಿಡನಿಡಂಬೂರು ಗ್ರಾಮದ ಸ.ನಂ. 58/1ಎ ರಲ್ಲಿ 2.36 ಹಾಗೂ ಸ.ನಂ. 52/4ಎ2 ರಲ್ಲಿ 0.14 ಎಕ್ರೆ ಒಟ್ಟು 2.50 ಎಕ್ರೆ ಜಮೀನನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಬಸ್ ನಿಲ್ದಾಣ ನಿರ್ಮಿಸಲು ಶುಲ್ಕ ವಿನಾಯಿತಿ ನೀಡಿ ಉಚಿತವಾಗಿ ಹಸ್ತಾಂತರಿಸಲು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ ಹಾಗೂ ಮಾರ್ಗಸೂಚಿ ದರದಂತೆ ಸದರಿ ಜಮೀನಿನ ದರ ಒಟ್ಟು ರೂ. 1,11,32,200–00 ಗಳಾಗುತ್ತದೆಂದು ತಿಳಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಆರ್ಥಿಕ ಸಂಕಷ್ಟದಲ್ಲಿದ್ದು ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಬಸ್ ನಿಲ್ದಾಣ ನಿರ್ಮಿಸಲಿರುವುದರಿಂದ ಲೋಕೋಪಯೋಗಿ ಇಲಾಖೆಯು ಕೋರಿರುವ ಮೊತ್ತವನ್ನು ಪಾವತಿಸುವ ಸ್ಥಿತಿಯಲ್ಲಿಲ್ಲವೆಂದೂ ಹಾಗೂ ಕೆ.ಎಸ್.ಆರ್.ಟಿ.ಸಿ.ಯ ಆಡಳಿತ ಮಂಡಳಿಯು ಯಾವುದೇ ಜಮೀನನ್ನು ಖರೀದಿಸಲು ನಿರ್ಬಂಧ ವಿಧಿಸಿದೆ. ಸಾರ್ವಜನಿಕರ ಹಿತದೃಷ್ಟಿಯಿಂದ ಈಗಾಗಲೇ ಟಿ.ನರಸೀಪುರದಲ್ಲಿ ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣ ಹಾಗೂ ಉಡುಪಿಯಲ್ಲಿ ನಗರ ಬಸ್ ನಿಲ್ದಾಣ ನಿರ್ಮಿಸಲು ಉಚಿತವಾಗಿ ಜಮೀನು ಮಂಜೂರು ಮಾಡಿರುವ ರೀತ್ಯಾ ಉಡುಪಿ ತಾಲ್ಲೂಕು ಮೂಡನಿಡಂಬೂರು ಗ್ರಾಮದ 2.50 ಎಕರೆ ಜಮೀನನ್ನು ಉಚಿತವಾಗಿ ಮಂಜೂರು ಮಾಡಬೇಕೆಂದು ಕೋರಿರುತ್ತಾರೆ. ಅದರ ಬದಲಾಗಿ ಕೆ.ಎಸ್.ಆರ್.ಟಿ.ಸಿ. ಆಡಳಿತ ಮಂಡಳಿಯ ಘಟನೋತ್ತರ ಅನುಮೋದನೆ ಕಾಯ್ದಿರಿಸಿ ಉಡುಪಿ ತಾಲ್ಲೂಕು, ಕಡೇಕಾರ್ ಗ್ರಾಮದ ಸರ್ವೆ ನಂ. 76/1, 76/2 ಮತ್ತು 76/3 (ಕಿನ್ನಿಮೂಲ್ಕಿಯ ಫೈರ್ ಸ್ಟೇಷನ್ ಹತ್ತಿರ)ರಲ್ಲಿ 1.12 ಎಕರೆ ಕೆ.ಎಸ್.ಆರ್.ಟಿ.ಸಿ.ಯ ಜಮೀನನ್ನು ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಲು ಕೆ.ಎಸ್.ಆರ್.ಟಿ.ಸಿ. ಸಹಮತವಿದೆ ಎಂದು ವ್ಯವಸ್ಥಾಪಕ ನಿರ್ದೇಶಕರು, ಕೆ.ಎಸ್.ಆರ್.ಟಿ.ಸಿ. ರವರು ತಿಳಿಸಿದ್ದಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ :–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 107 ಎಲ್‌ಜಿಎ 2015, ಬೆಂಗಳೂರು, ದಿನಾಂಕ: 28.04.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉಡುಪಿ ತಾಲ್ಲೂಕು ಕಡೇಕಾರ್ ಗ್ರಾಮದ ಸರ್ವೆ ನಂ. 76/1, 76/2 ಮತ್ತು 76/3 (ಕಿನ್ನಿಮೂಲ್ಕಿಯ ಫೈರ್ ಸ್ಟೇಷನ್ ಹತ್ತಿರ)ರಲ್ಲಿ 1.12 ಎಕರೆ ಜಮೀನನ್ನು ಕೆ.ಎಸ್.ಆರ್.ಟಿ.ಸಿ. ಸಂಸ್ಥೆಯ ಬದಲಿ ಜಮೀನಾಗಿ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸುವ ಷರತ್ತಿಗೆ ಒಳಪಟ್ಟು, ಉಡಪಿ ತಾಲ್ಲೂಕಿನ ಮೂಡನಿಡಂಬೂರು ಗ್ರಾಮದ ಸ.ನಂ. 58/1ಎ ರಲ್ಲಿ ಲೋಕೋಪಯೋಗಿ ಇಲಾಖೆಯ ವಶದಲ್ಲಿರುವ 2.36 ಎಕರೆ ಹಾಗೂ ಸರ್ವೆ ನಂ. 52/4ಎ2ರಲ್ಲಿ 0.14 ಎಕರೆ ಸರ್ಕಾರಿ ಜಮೀನು, ಒಟ್ಟು 2.50 ಎಕರೆ ಜಮೀನನ್ನು ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣ ನಿರ್ಮಿಸಲು ಉಚಿತವಾಗಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಈ ಕೆಳಕಂಡ ಇತರ ಷರತ್ತಿಗೊಳಪಟ್ಟು ಮಂಜೂರು ಮಾಡಿ ಆದೇಶಿಸಿದೆ.

1. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಿಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು, 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

**P.R. 369**

**S.C. - 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉದಯ ಆರ್.ನಾಯಕ್**

ಪೀಠಾಧಿಕಾರಿ

ಕಂದಾಯ ಇಲಾಖೆ (ಭೂ.ಮಂ–2)

## ENERGY SECRETARIAT

**Sub:** Coal based Thermal Power Project in Hassan by Hassan Thermal Power (P) Limited (HTPPL)

.**PREAMBLE :**

1. The proposal to Set up 660 MW Super Critical Power Plant by M/s. Hassan Thermal Power Private Limited for a period of twenty five years under Memorandum of Understanding Route has emerged from selection of developer under Competitive Bid route in 1996.

   Government of Karnataka accorded approval for setting up of barge mounted power plant of capacity of 150 MW at Mulki River near Mangalore by M/s. Euro Kapital.

   The objective of setting up of barge mounted power plant on the coast within 6 months was to bridge the Short term gap i.e., gestation period at that time.

2. Thereafter, at the instance of Project Developer, from time to time Governmnent of Karnataka has accorded concurrence for change of the name of company, location, fuel etc… The details are as below :

   a) In the year 1997, Company requested to change the name to Euro India Power Canara (P) Limited (EIPCL) and PPA was initialed on 10.03.1997 between EIPCL and KEB for 150 MW plant with a provision to use Naptha or LSHS.

   b) Based on the request of the Company to change fuel from Naptha to LSHS, GOK vide its Order dated 31.10.1998 accorded permission to Euro India Power Canara (P) Ltd., (EIPCL) to setup LSHS based power plant of 150 MW capacity and directed KEB to sign the PPA.

   c) Based on the request of the Company, Government vide its Order dated 31.03.1999 has accorded approval for capacity enhancement from 150 MW to 195 MW and change of fuel from LSHS to Naptha.

      PPA was signed on 22.04.1999 with EIPCL for a period of 7 years and tariff agreed was based on two part tariff structure comprising of fixed and variable cost.

      GOK also accorded approval for extension of time for achieving Financial Closure upto 30.06.2000.

   d) On the request of the Company, in Feb 2001, in principle approval was accorded for capacity enhancement to 220 MW, land based coal based project to be located in adjoining districts of Bengaluru treating the proposal as an extended bid route.

   e) In May 2001 the company requested for change of location to Mandya. The company also requested to send the revised PPA to Government for approval, with the following amendments in the PPA signed on 22.04.1999.

      - Location: Mandya District
      - Fuel: Coal
      - Capacity: 220 MW

   f) Firm had initiated Arbitration Proceedings due to inaction to amend the PPA. After several sittings, Arbitral Tribunal in its proceedings dated 5th August 2004 has terminated the said proceedings in view of settling the matter amicably in August 2004.

   g) In the year 2006, the company requested for change of location form Mandya to Hassan and enhancement of capacity to 300 MW with coal. Approval was accorded to change the location from Mandya to Hassan and change capacity to 300 MW with imported coal.

   h) GOK accorded approval in April 2007 to enhance the capacity from 300 MW to 500 MW subject to the condition that the tariff shall not be higher than the Bellary Thermal Power Station (BTPS), Stage-I, Further, in May 2007 accorded approval to change the name to M/s. Hassan Thermal Power (P) Limited (HTPPL). The draft PPA between ESCOMs and HTPPL was initialed on 25.06.2007.

   i) GOK accorded approval in July 2007 for initialed PPA with following conditions.

      - FC shall be as per BTPS 1st unit with adjustment of interest rate of 11.5% or actual whichever is less.
      - VC shall be ₹. 1.12/unit subject to adjustment for Foreign Exchange Rate Variation (FERV) in respect of imported coal.

- Tariff parameter shall be as per BTPS 1st unit.
- No Government Guarantee shall be given in respect of the payments to be made by ESCOMs.

j) Karnataka Electricity Regulatory Commission (KERC) in its letter in August 2007 stated that PPA cannot be processed as the project has been treated as Extended Bid Route Project and it is not in order since the location of project is changed from adjoining districts of Bengaluru to Mandya and then to Hassan, capacity is revised to 220 MW (subsequently changed to 500 MW) and Fuel is changed from LSHS to Naptha and then to Coal.

Further, KERC has objected for bench marking the Tariff with that of BTPS since BTPS Tariff has not yet been determined by KERC. Hence the PPA was not processed by KERC.

9. The National tariff policy-was issued on 06-01-2006 by Central Government Under Section-3 of the Electricity Act-2003, para 5.1 of tariff Policy reads as under.

a) "All future requirement of power should be procured competitively by distribution licensees except in the case of expansion of existing project or where there is a state controlled/owned company as an identified developer and where regulators will need to resort to tariff.

b) Determination based on norms provided that expansion of Generating capacity by private developer for this purpose would be restricted to one time addition of not more than 50% of the existing capacity.

Even for the public sector projects, tariff of all new Generation and transmission project should be decided on the basis of competitive bidding after a period of five years or when the Regulatory Commission is satisfied that the situation is ripe to introduce such competition".

10. Further the KERC (Condition of license for ESCOMs) Regulation 2004 regarding power procurement procedure provides as follows:

i. The Licensee shall in all circumstances purchase electrical capacity and/or energy in an efficient and economical manner under a transparent procurement process as approved by the commission after following the guide lines issued by the commission from time to time relating to preparation of load forecast, power procurement plan and power procurement procedure.

ii. The licensee shall not purchase electrical capacity and/or energy without an authorization granted by the commission under the terms of condition 21.1 except in the case of short duration purchases for less than 6 months.

The power utility is required to enter in to PPA's only in the manner which is approved by the KERC. Section 27 of Karnataka Electricity Reforms Act, 1999 prohibits signing of any contract for purchase of power without approval of the Regulator. Further Section 86 (b) of Electricity act 2003, provides that "the state commission shall regulate electricity purchase and procurement process of distribution licensees including the price at which electricity shall be procured from the generating companies or licensees or from other sources through agreements for purchase of power for distribution and supply within the state.

11. The Ministry of Power with the objective for competitive procurement of Electricity, facilitating transparency and fairness in procurement processes, protecting consumer interest by facilitating competitive condition power procurement, enhance standardization and reduce ambiguity has been issuing guidelines for determination of tariff by bidding process for procurement of power by distribution licensees.

k) Exercising the power vested under Section 108 of Electricity Act, 2003 Government in 2007 directed KERC to process the draft PPA submitted by BESCOM.

3. In response to the various correspondences, KERC vide letter dated 14.08.2009 has directed to resubmit the PPA after revising the same as per the CERC Regulations 2009. KERC vide letter dated 12.11.2010 issued directions to submit the PPA in accordance with KERC (Terms and conditions of Generation tariff) Regulation 2009, duly signed by both the parties to the agreement for approval of PPA under section 86 (1)(b) of Electricity Act 2003.

4. GOK vide its Order dated 14.06.2011 has constituted an official committee under the Chairmanship of Chief Secretary, GOK for examining the issue of establishing 500 MW coal based power project by M/s. Hassan Thermal Power (P) Limited.

5. The recommendations of the Committee were discussed and it was decided to seek the clarification from Hon'ble KERC, Government of Karnataka on 11.03.2013 sought clarifications from Hon'ble KERC under section 86(2) (iv) of EA

2003. In response, Hon'ble KERC vide letter dated 10.07.2013 has issued the clarifications to GoK letter dated 11.03.2013.

6. KERC left the discretion regarding to proceed with project or not to the Government and ESCOMs based on the demand for electricity in the State and other relevant factors.

Commission has also stated that at this juncture it is not possible to comment on whether the capital cost agreed by the project proponent is reasonable or not.

Further, Commission has stated that at this juncture the project has to be treated as a negotiated project and not a bid route project. Commission felt that it is not appropriate to suggest procurement of power from any particular project when the terms of such procurement are yet to be spelt out. However, Commission agreed to examine the PPA under Section 62 read with Section 64 of the Act.

7. Under MoU Route, Tariff Determination is based on the terms and conditions of Tariff Regulations whereas under the Bid Route the tariff is determined through discovery of tariff by competitive bidding.

8. In response, GOK letter dated 08.11.2010 Ministry of Power on 29.11.2010 have clarified that "In view of the tariff policy provision, it is clear that procurement of power by distribution licensee is to be done through competitive bidding as mentioned above. As regards to MoU's signed by PSU/CPSUs are concerned, unless there are converted in to PPA by the stipulated date further procurement only on MoU/cost plus basis would be incorrect".

12. The National Tariff Policy encourages introduction of competitiveness in the interest of consumers, Further, as per Section 61 of Electricity Act, 2003 the generation, transmission, distribution and supply of Electricity are conducted on commercial principles, encourage competition, efficiency, economical use of the resource and optimum investment etc., safeguarding the consumer interest.

13. Even in the new Tariff Policy issued by Government of India on 28.01.2016 in para 5.2, it is stipulated that all future requirement of power should continue to be procured competitively by Distribution licensees except in case of expansion of existing projects or Public Sector Projects.

14. The project though conceived in 1995 through competitive bidding route, has undergone several changes, over the period of time. All parameters of the projects like location is changed from Mangaluru to adjoining district of Bengaluru to Mandya and then to Hassan, capacity is revised from 150MW to 195MW to 220MW to 300MW to 500MW (subsequently changed to 660MW) and fuel is changed from LSHS to Naptha and then to coal. Since 1995, as is evident from the following:

| Govt. Order/Letter date | Name of the Firm | Capacity | Fuel | Location | Remarks |
|---|---|---|---|---|---|
| DE 284 PPC 95(3) Dated: 05.03.1996 | M/s Euro Kapital | 150 MW | LSHS | Barge mounted Project at Mangaluru | Initial Bid |
| DE 98 PPC 96 Dated: 31.10.1998 | Euro India Power Canara (P) Ltd., (EIPCL) | 150 MW | LSHS | Barge mounted Project at Mangaluru | Change of Name |
| DE 98 PPC 96 Dated: 31.03.1999 | Euro India Power Canara (P) Ltd., (EIPCL) | 195 MW | Naptha | Barge mounted Project at Mangalore | Change of Fuel and enhancement of Capacity. PPA was signed on 22.04.1999 with KEB |
| DE 98 PPC 96 Dated: 19.02.2001 | Euro India Power Canara (P) Ltd., (EIPCL) | 220 MW | Coal | Land based. Adjoining districts of Bengaluru | Change of Location, fuel, capacity. Treating the proposal as an extended bid route project |

| Govt. Order/Letter date | Name of the Firm | Capacity | Fuel | Location | Remarks |
|---|---|---|---|---|---|
| DE 98 PPC 96 Dated: 22.05.2001 | Euro India Power Canara (P) Ltd., (EIPCL) | 220 MW | Coal | Mandya Dist. | Change of Location |
| DE 98 PPC 96 Dated: 23.09.2006 | Euro India Power Canara (P) Ltd., (EIPCL) | 300 MW | Imported coal | Hassan | Change of Location capacity |
| DE 98 PPC 96 Dated: 19.04.2007 | Euro India Power Canara (P) Ltd., (EIPCL) | 500 MW | Imported coal | Hassan | Enhancement of capacity |
| DE 98 PPC 96 Dated: 18.05.2007 | Approval was accorded for changing the name from EIPCL to M/s Hassan Thermal Power (P) Limited (HTPPL) | 500 MW | Imported coal | Hassan | PPA was initialed on 25.06.2007 between ESCOMs and HTPPL & Govt. accorded approval on 30.07.2007 |
| In November 2011 it is proposed to enhance the capacity of the project from 500MW to 660MW in view of advantages of supercritical project (660MW and above) over subcritical projects (below 600MW) | | | | | |

Therefore the projects has lost the character of the bid route project.

15. Further as per the provisions of Electricity Act 2003, National Electricity policy, National Tariff Policy and KERC regulations Power has to be procured by transparent bidding process.

16. Therefore procurement of power from this project is not in the interest of Public. Hence the following Order.

**Government Order No. EN 14 PPC 2011, Bengaluru, Dated: 11th April 2016**.

In the Circumstances explained in Preamble. Government here by accords approval to withdraw the approval given to M/s. Hassan Thermal Power (P) Ltd., for implementation of Coal based Thermal Power Plant at Hassan and not to process the initialed Power Purchase Agreement (PPA) between ESCOMs and HTPPL dated 25.06.2007.

**PR. 389**
**SC. 10**

By Order and in the name of the Governor of Karnataka
**A.A. CHAPPARBAND**
Under Secretary to Government,
Energy Department.

## ಸಹಕಾರ ಸಚಿವಾಲಯ

ವಿಷಯ: 2016–17ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಕಣಗಿನಹಾಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಪುನಶ್ಚೇತನ ಹಾಗೂ ಸಬಲೀಕರಣಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ
1. ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 55 ವೆಚ್ಚ–2/2016, ದಿನಾಂಕ: 01–04–2016
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ: ಆರ್‌ಸಿಎಸ್/ಸಿಆರ್‌ಡಿ/ಕೆಎಂಸಿ–8/02/2016–17, ದಿನಾಂಕ: 22.04.2016.

**ಪ್ರಸ್ತಾವನೆ :**

2016–17 ಸಾಲಿನ ಆಯವ್ಯಯದಲ್ಲಿ ಕಣಗಿನಹಾಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ, ಗದಗ ಜಿಲ್ಲೆ ಇದರ ಪುನಶ್ಚೇತನ ಹಾಗೂ ಸಬಲೀಕರಣಕ್ಕೆ ₹. 100 ಲಕ್ಷಗಳ ಅನುದಾನ ಘೋಷಿಸಲಾಗಿರುತ್ತದೆ.

ಮೇಲೆ ಓದಲಾದ (1) ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಈ ಯೋಜನೆಗೆ ಲೆಕ್ಕ ಶೀರ್ಷಿಕೆ 2425–00–107–2–55 ರಡಿ ₹.100 ಲಕ್ಷಗಳ ಅನುದಾನ ಹಂಚಿಕೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ., ಕಣಗಿನಹಾಳ ಈ ಸಂಘವು ಏಷ್ಯಾ ಖಂಡದಲ್ಲಿ ಪ್ರಥಮ ಕೃಷಿ ಪತ್ತಿನ ಸಹಕಾರ ಸಂಘವಾಗಿ ದಿನಾಂಕ: 08.05.1905 ರಲ್ಲಿ ನೋಂದಾಯಿಸಲ್ಪಟ್ಟಿದ್ದು, ಅಲ್ಲಿಂದ ರೈತರಿಗೆ ಕೃಷಿ ಸಾಲವನ್ನು ಒದಗಿಸುತ್ತಾ ಬಂದಿದ್ದು, ಸಂಘವು 2005 ರಲ್ಲಿ ಶತಮಾನೋತ್ಸವವನ್ನು ಆಚರಿಸಿದ್ದು, ಸಂಘದಲ್ಲಿ 997 ಸದಸ್ಯರನ್ನು ಹೊಂದಿದ್ದು, ದಿನಾಂಕ: 31.03.2014ಕ್ಕೆ ರೂ. 9.11 ಲಕ್ಷಗಳ ಶೇರು ಬಂಡವಾಳ ಹಾಗೂ ₹. 38.92 ಲಕ್ಷಗಳ ಇತರೆ ನಿಧಿಗಳನ್ನು ಹೊಂದಿದ್ದು, ಈ ನಿಧಿಯನ್ನು ಸಂಘದ ವ್ಯವಹಾರಗಳಿಗೆ ತೊಡಗಿಸಿಕೊಂಡಿರುವುದಾಗಿ ತಿಳಿಸಿ, ಭಾರತದ ಮೊಟ್ಟ ಮೊದಲ ಕೃಷಿ ಸಹಕಾರ ಸಂಘ ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿರುವ ಈ ಸಂಘದ ಪುನಶ್ಚೇತನ ಹಾಗೂ ಸಬಲೀಕರಣಕ್ಕೆ 2016–17ನೇ ಸಾಲಿನ ಆಯವ್ಯಯದಲ್ಲಿ ಅವಕಾಶ ಕಲ್ಪಿಸಿರುವಂತೆ ₹. 100 ಲಕ್ಷಗಳ ಅನುದಾನವನ್ನು ಮಂಜೂರು ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 251 ಸಿಎಲ್ಎಸ್ 2016, ಬೆಂಗಳೂರು, ದಿನಾಂಕ: 11.05.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ., ಕಣಗಿನಹಾಳ ಇದರ ಪುನಶ್ಚೇತನ ಹಾಗೂ ಸಬಲೀಕರಣಕ್ಕೆ 2016–17ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ "2425–00–107–2–55 ರಡಿಯಲ್ಲಿ ಒದಗಿಸಲಾಗಿರುವ ₹.100 ಲಕ್ಷಗಳ ಅನುದಾನದ ಮಿತಿಯೊಳಗೆ ಯೋಜನೆಯನ್ನು ಜಾರಿಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 07 ಎಫ್ಆರ್ಓ 2016, ದಿನಾಂಕ: 10.05.2016 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 98 ವೆಚ್ಚ–2/2016, ದಿನಾಂಕ: 10.05.2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ

**PR. 390**
**SC. 50**

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಗಳನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರ ನಡೆಸಿರುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರಡಿ ನೇಮಕವಾದ ವಿಚಾರಣಾಧಿಕಾರಿಗಳು ನಡೆಸುವ ವಿಚಾರಣಾ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಒ 33 ಸಿಎಲ್ಎಂ 2010, ದಿನಾಂಕ: 19–08–2011
2. ಸರ್ಕಾರದ ಆದೇಶ ಸಂಖ್ಯೆ: ಸಿಒ 31 ಸಿಎಲ್ಎಂ 2012, ದಿನಾಂಕ: 17–03–2012
3. ಸರ್ಕಾರದ ಆದೇಶ ಸಂಖ್ಯೆ: ಸಿಒ 31 ಸಿಎಲ್ಎಂ 2012, ದಿನಾಂಕ: 23–09–2014
4. ಸರ್ಕಾರದ ಆದೇಶ ಸಂಖ್ಯೆ: ಸಿಒ 43 ಸಿಎಲ್ಎಂ 2015, ದಿನಾಂಕ: 23–02–2015
5. ಸರ್ಕಾರದ ಆದೇಶ ಸಂಖ್ಯೆ: ಸಿಒ 170 ಸಂಮಾಸ 2015, ದಿನಾಂಕ: 10–08–2015
6. ಸರ್ಕಾರದ ಆದೇಶ ಸಂಖ್ಯೆ: ಸಿಒ 170 ಸಂಮಾಸ 2015, ದಿನಾಂಕ: 08–12–2015
7. ಸರ್ಕಾರದ ಆದೇಶ ಸಂಖ್ಯೆ: ಸಿಒ 170 ಸಂಮಾಸ 2015, ದಿನಾಂಕ: 27–01–2016
8. ಸಹಕಾರ ಸಂಘಗಳ ನಿಬಂಧಕರ ಕಛೇರಿ ಪತ್ರ ಸಂಖ್ಯೆ: ಯುಬಿಸಿ1/169/ವಿಚಾರಣೆ/2009–10, ದಿನಾಂಕ: 20.04.2016

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಯನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರವನ್ನು ನಡೆಸಿ ಬ್ಯಾಂಕಿಗೆ ಉಂಟು ಮಾಡಿರುವ ನಷ್ಟದ ಪ್ರಮಾಣವನ್ನು ನಿರ್ಧರಿಸಿ ಹಾಗೂ ಬ್ಯಾಂಕಿಗೆ ವಿಧಿಸಿರುವ ₹. 5.00 ಲಕ್ಷಗಳ ದಂಡವನ್ನು ಸಂಬಂಧಪಟ್ಟ ಆಡಳಿತ ಮಂಡಳಿಯ ಸದಸ್ಯರು/ಅಧಿಕಾರಿಗಳಿಂದ ವಸೂಲಿಗೆ ಜವಾಬ್ದಾರಿ ನಿಗದಿಪಡಿಸುವ ಬಗ್ಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64ರ ಅಡಿ ವಿಚಾರಣಾಧಿಕಾರಿಗಳನ್ನು ವಿಚಾರಣೆಗೆ ನೇಮಿಸಿ ದಿನಾಂಕ: 28.08.2009 ರಂದು ಸಹಕಾರ ಸಂಘಗಳ ನಿಬಂಧಕರು ಆದೇಶ ಹೊರಡಿಸಿರುತ್ತಾರೆ. ನಂತರ ವಿಚಾರಣಾ ಅವಧಿಯನ್ನು ಕಾಲ ಕಾಲಕ್ಕೆ ಮೇಲೆ ಓದಲಾದ (1) ರಿಂದ (6) ರವರೆಗಿನ ವಿವಿಧ ದಿನಾಂಕಗಳಲ್ಲಿ ಅವಧಿ ವಿಸ್ತರಿಸಿದ್ದು, ಕೊನೆಯದಾಗಿ ಉಲ್ಲೇಖ (7)ರ ಸರ್ಕಾರದ ಆದೇಶದಲ್ಲಿ ದಿನಾಂಕ: 31.03.2016 ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಮೇಲೆ ಓದಲಾದ (8)ರ ದಿನಾಂಕ: 20.04.2016ರ ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವೆಯಲ್ಲಿ ಕಲಂ 64ರ ವಿಚಾರಣಾಧಿಕಾರಿಗಳು ದಿನಾಂಕ: 11.03.2016 ರಂದು ಕಾರ್ಯ ವರದಿ ಮಾಡಿಕೊಂಡಿದ್ದು, ವಿಚಾರಣೆಯಲ್ಲಿನ ಅಂಶಗಳು ಗಂಭೀರ ಸ್ವರೂಪದ್ದಾಗಿದ್ದು, ವಿವರವಾಗಿ ಪರಿಶೀಲನೆ ನಡೆಸಿ ವರದಿ ಸಲ್ಲಿಸಲು ದಿನಾಂಕ: 31.03.2016 ರೊಳಗಾಗಿ ವರದಿ ಸಲ್ಲಿಸಲು ಸಾಧ್ಯವಿರುವುದಿಲ್ಲ. ಈ ಹಿನ್ನಲೆಯಲ್ಲಿ ಈಗಾಗಲೇ ಕೋರಿರುವ ವಿಚಾರಣಾ ಅವಧಿಯನ್ನು ದಿನಾಂಕ: 01.04.2016 ರಿಂದ 30.06.2016 ರವರೆಗೆ ವಿಸ್ತರಿಸಲು ವಿಚಾರಣೆ ಅಧಿಕಾರಿಗಳು ಕೋರಿರುವುದಾಗಿ ಅದರಂತೆ ವಿಸ್ತರಿಸಲು ನಿಬಂಧಕರು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಒ 170 ಸಂಮಾಸ 2015, ಬೆಂಗಳೂರು, ದಿನಾಂಕ: 12.05.2016**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 64 (2–ಎ)ರ ಉಪಬಂಧಗಳಲ್ಲಿಯ ಆರು ತಿಂಗಳು ಎಂಬ ಪದಗಳಿಗೆ ಬದಲಾಗಿ ಎಪ್ಪತ್ತೊಂದು ತಿಂಗಳು ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು. ಹಾಗೂ ಸದರಿ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ಕೈಗಾರಿಕಾ ವಾಣಿಜ್ಯ ಸಹಕಾರ ಬ್ಯಾಂಕ್ ನಿ., ಬೆಂಗಳೂರು ಇದು ಭಾರತೀಯ ರಿಸರ್ವ್ ಬ್ಯಾಂಕಿನ ಸುತ್ತೋಲೆಗಳನ್ನು ಉಲ್ಲಂಘಿಸಿ ನಾನ್ ಎಸ್.ಎಲ್.ಆರ್. ವ್ಯವಹಾರವನ್ನು ನಡೆಸಿರುವ ಬಗ್ಗೆ ಆದೇಶಿಸಲಾದ ಕಲಂ 64ರ ವಿಚಾರಣಾ ಅವಧಿಯನ್ನು ದಿನಾಂಕ: 01.04.2016 ರಿಂದ 30.06.2016 ರವರೆಗೆ ವಿಸ್ತರಿಸಲಾಗಿದೆ.

ಈ ಹಿಂದಿನ ಆದೇಶಗಳಲ್ಲಿ ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 64 (2–ಎ) ಉಪಬಂಧಗಳು ಪುನಃ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ.

**PR. 391**

**SC. 50**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59